# ಕನ್ನಡ ಹಸ್ತಪ್ರತಿಗಳ ವಿಷಯ ಸಂಪತ್ತು

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಿದ ಪ್ರೌಢ ಪ್ರಬಂಧ

ಸಂಶೋಧಕ
ಐ.ಜೆ. ಮ್ಯಾಗೇರಿ

ಮಾರ್ಗದರ್ಶಕರು
ಡಾ. ವೀರೇಶ ಬಡಿಗೇರ



ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಸೆಪ್ಟೆಂಬರ್-೧೯೯೭

146

# ಕನ್ನಡ ಹಸ್ತಪ್ರತಿಗಳ ವಿಷಯ ಸಂಪತ್ತು

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಿದ ಪ್ರೌಢ ಪ್ರಬಂಧ


ಸಂಶೋಧಕ

ಐ.ಜೆ. ಮ್ಯಾಗೇರಿ





ಮಾರ್ಗದರ್ಶಕರು

ಡಾ. ವೀರೇಶ ಬಡಿಗೇರ








ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ, ೫೮೩ ೨೨೧

ಸೆಪ್ಟೆಂಬರ್-೧೯೯೭

# ಮಾರ್ಗದರ್ಶಕರ ಪತ್ರ

ಶ್ರೀ ಐ.ಜೆ.ಮ್ಯಾಗೇರಿ ಇವರು "ಕನ್ನಡ ಹಸ್ತಪ್ರತಿಗಳ ವಿಷಯ ಸಂಪತ್ತು" ಎಂಬ ಶೀರ್ಷಿಕೆಯ ಈ ಪ್ರೌಢ ಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ.

ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಪ್ರಬಂಧವನ್ನು ಮತ್ತು ಇದರ ಯಾವುದೇಭಾಗವನ್ನು ಈ ಹಿಂದೆ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಘೋಷಿಸುತ್ತೇವೆ.

ಡಾ.ವೀರೇಶ ಬಡಿಗೇರ
ಪ್ರವಾಚಕರು ಮತ್ತು
ಮಾರ್ಗದರ್ಶಕರು
ಹಸ್ತಪ್ರತಿ ಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ.
ವಿದ್ಯಾರಣ್ಯ ಕಾಮಲಾಪುರ.

ಸ್ಥಳ: ವಿದ್ಯಾರಣ್ಯ
ದಿನಾಂಕ: 20-5-52

# ಅಭ್ಯರ್ಥಿಯ ದೃಢೀಕರಣ ಪತ್ರ

"ಕನ್ನಡ ಹಸ್ತಪ್ರತಿಗಳ ವಿಷಯ ಸಂಪತ್ತು" ಎಂಬ ಪ್ರೌಢ ಪ್ರಬಂಧವನ್ನು ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಲು. *ಡಾ.ವೀರೇಶ ಬಡಿಗೇರ* ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತಪ್ರಬಂಧ ಯಾವುದೇ ಭಾಗವನ್ನು ಈ ಹಿಂದೆ ಯಾವುದೇ ಪದವಿಗಳಿಗಾಗಲಿ ಅಥವಾ ಇತರ ಯಾವುದೇ ಉದ್ದೇಶಕ್ಕಾಗಲಿಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಐ.ಜೆ.ಮ್ಯಾಗೇರಿ
ಎಂ.ಫಿಲ್. ವಿದ್ಯಾರ್ಥಿ
ಹಸ್ತಪ್ರತಿ ಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ.
ವಿದ್ಯಾರಣ್ಯ-ಕಾಮಲಾಪುರ.

ಸ್ಥಳ:ವಿದ್ಯಾರಣ್ಯ:
ದಿನಾಂಕ: 20-6-52

# ನಮಸ್ತುಂಗೆ ಶಿರಶ್ಚುಂಬಿ

ಆದಿ "ಕನ್ನಡ ಹಸ್ತಪ್ರತಿ ವಿಷಯ ಸಂಪತ್ತು" ಬರೆವುದಕ್ಕೆ ಶುಭಮಸ್ತು

ಎಂ. ಫಿಲ್. ಪದವಿಯ ಈ ಪ್ರೌಢ ಪ್ರಬಂಧಮಂ ಬರೆವುದಕೆ ಪೋಷಣೆ ನೀಡಿದ ಪಂಪಾ ವಿರೂಪಾಕ್ಷ ಸ್ವಾಮಿಯ ತೆಂಕಣಕ್ಕೆ ನೆಲೆಗೊಂಡ ಕನ್ನಡ ವಿಶ್ವವಿದ್ಯಾಲಯದ ಕಾರಣ ಕರ್ತೃಗಳಾದ ಕುಲಪತಿ ಶ್ರೀ.ಶ್ರೀ ಚಂದ್ರಶೇಖರ ಕಂಬಾರವರಿಗೆ ನಮಸ್ತುಂಗೇ

ಕುಲಸಚಿವರಾದ ಶ್ರೀ.ಕೆ.ಎಂ.ಸುರೇಶ್ ರವರಿಗೆ ನಮಸ್ತುಂಗೇ

ಅಧ್ಯಯನಾಂಗದ ನಿರ್ದೇಶಕರಾದ ಶ್ರೀ ಮಲ್ಲೇಪುರಂ .ಜಿ.ವೆಂಕಟೇಶ್ ರವರಿಗೆ ನಮಸ್ತುಂಗೆ

ಈ ಪ್ರೌಢ ಪ್ರಬಂಧಮಂ ತಿದ್ದಿ ತೀಡಿ ಬರೆಸಿದ ಮಾರ್ಗದರ್ಶಕರೂ ಗುರುಗಳೂ ಆದ ಶ್ರೀ.ಡಾ:ವೀರೇಶ್ ಬಡಿಗೇರವರಿಗೆ ಸಾವಿರದ ನಮಸ್ತುಂಗೇ

ಅಕ್ಷರಮಂ ಕಲಿಸಿದ ಜನ್ಮದಾತರಾದ ತಂದೆತಾಯಿಗಳಿಗೆ ಅನಂತ ನಮಸ್ತುಂಗೇ

ಈ ಪ್ರೌಢ ಪ್ರಬಂಧಮಂ ಬರೆವಾಗ ಕೆಲವಂ ಬಲ್ಲವರಿಂದ ಕಲ್ತು , ಕೆಲವಂ ಬಲ್ಲವರಿಂದ ತಿಳಿದು, ಇನ್ನೂ ಕೆಲವಂ ಸುಜನೋತ್ತಪಂಡಿತಮಪ್ಪ ಮಂಡಲಿಯಿಂದ ಕಲ್ತು ಸಿದ್ಧಪಡಿಸಲಾಗಿದೆ.

ಈ ಸಮಯದೊಳ್ ನೆರವಾದ ಕರ್ನಾಟಕ ವಿಶ್ವವಿದ್ಯಾಲಯದ ಗುರುಬಳಗಕ್ಕೂ, ಕನ್ನಡ ವಿಶ್ವವಿದ್ಯಾಲಯದ ಸರ್ವ ವಿದ್ವಾಂಸರಿಗೂ ಸಹಕರಿಸಿದ ಸಕಲ ಸಂಶೋಧನ ಸಂಗಾತಿಗಳಿಗೂ, ಅಕ್ಷರ ಗ್ರಂಥಾಲಯದ ಸಿಬ್ಬಂದಿ ವರ್ಗಕ್ಕೂ, ವಿದ್ಯಾರಣ್ಯದ ಸಕಲ ಸಂಪನ್ನರಿಗೂ , ಯಿನ್ನೂ ಅನೇಕರಿಗೂ ನಮಸ್ತುಂಗೆ

ಗಣಕಯಂತ್ರಕ್ಕೆ ಅಳವಡಿಸಿ ಸಹಕಾರ ನೀಡಿದ ಎ.ಎಂ.ಕೃಪಾಶಂಕರ, ಶ್ರೀಮತಿ ರೇಣುಕಾ ಹಾಗೂ ಸ್ಫೂರ್ತಿಗಣಕಯಂತ್ರದ ಸಕಲ ಸಿಬ್ಬಂದಿಗೂ ನಮಸ್ತುಂಗೆ

ಅಂತ್ಯ : ಇದು ಸಮಸ್ತ ಕನ್ನಡ ಭುವನ ಜನ ಮಹದಾಶ್ರಯ ಸಿರಿಗನ್ನಡದ ಕೃಪಾಕಟಾಕ್ಷದಿಂದ ರೂಪಗೊಂಡ ಪ್ರೌಢ ಪ್ರಬಂಧಮಂ. ಇಂತು ಅಧ್ಯಾಯ ಐದಕ್ಕಂ ಮುಗಿದುದು

ಬರೆಸಿದವರಾರೆಂದರೆ ಕನ್ನಡ ವಿಶ್ವವಿದ್ಯಾಲಯದೊಳಗೆ ಹಸ್ತಪ್ರತಿಶಾಸ್ತ್ರದ ಶಾಖೆಯೊಳ್ ಪ್ರವಾಚಕರಾದ ಡಾ| ವೀರೇಶ ಬಡಿಗೇರ ಯಿವರು ಈ ಪ್ರಬಂಧಕ್ಕೆ ಕಾರಣ ಕರ್ತುಗಳು. ಇಂತು ಸ್ವಸ್ತಿ ಶ್ರೀ ಶಾಲಿವಾಹನ ಶಕೆ ವರುಷಂಗಳು ೧೯೧೯ನೆಯ ಈಶ್ವರನಾಮ ಸಂವತ್ಸರದ ಶ್ರಾವಣ ಭಾದ್ರಪದ ರೇವತಿ ಬಹುಳ ಹದಿನೆಂಟನೆಯ ತಾರೀಖು ಗುರುವಾರ ಹಗಲು ಪ್ರಸಂಗ ಹನ್ನೊಂದಕ್ಕೆ ಶುಭಮುಹೂರ್ತದೊಳ್ ಕನ್ನಡ ವಿಶ್ವವಿದ್ಯಾಲಯ ನೀಡಿದ ಅಕ್ಕರೆ ಅವಕಾಶಕ್ಕಂ ಪ್ರತಿಸಮಾನವಾಗಿ ಅರ್ಪಿಸಿದ ಪ್ರೌಢ ಪ್ರಬಂಧಮಂ ಮಂಗಳ ಮಹಾಶ್ರೀ ಶ್ರೀ ಶ್ರೀ ಶ್ರೀ ಶ್ರೀ ಶ್ರೀ .

ಐ.ಜಿ. ಮ್ಯಾಗೇರಿ

# ಪರಿವಿಡಿ

ಅಧ್ಯಾಯ- ಒಂದು

ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ.

ಅಧ್ಯಾಯ-ಎರಡು

ಹಸ್ತಪ್ರತಿಗಳ ತಾತ್ವಿಕ ವಿಶ್ಲೇಷಣೆ.

೧:ರೂಪ ಸ್ವರೂಪ.

೨:ವಿಷಯ ಸ್ವರೂಪ.

೩:ರೂಪ ಹಾಗೂ ವಿಷಯ ಸ್ವರೂಪಗಳ ವೈವಿಧ್ಯತೆ.

ಅ. ಜೈನ ಧಾರ್ಮಿಕ ಹಸ್ತಪ್ರತಿಗಳು; ಭವಾವಳಿ, ತೀರ್ಥಂಕರರ ಚರಿತೆ, ಪಂಚಕಲ್ಯಾಣ, ತ್ರಿಷಷ್ಠಿ, ಶಲಾಕ ಪುರುಷರ ಚರಿತ್ರೆ ಇತ್ಯಾದಿ ಮತ್ತು ಲೌಕಿಕ ಕೃತಿಗಳು.

ಬ. ವೀರಶೈವ ಧಾರ್ಮಿಕ ಹಸ್ತಪ್ರತಿಗಳು: ಧರ್ಮ-ತತ್ತ್ವ ನೀತಿ; ಪಂಚಾಚಾರ್ಯರು; ಶಿವಭಕ್ತ, ಶಿವಶರಣ, ೬೩ ಪುರಾತನರ ಚರಿತ್ರೆ; ತಾತ್ವಿಕ ಹಸ್ತಪ್ರತಿಗಳು, ಪಂಚಾಚಾರ್ಯ- ಷಟಸ್ಥಲ-ಅಷ್ಟಾವರಣ ಸಿದ್ಧಾಂತ.

ಕ. ವೈದಿಕ ಹಸ್ತಪ್ರತಿಗಳು; ರಾಮಾಯಣ, ಮಹಾಭಾರತ, ಭಾಗವತ, ವಿಷ್ಣುಭಕ್ತಿ, ನೀತಿಭೋದಕ ಕೀರ್ತನೆಗಳು.

ಅಧ್ಯಾಯ-ಮೂರು

ಹಸ್ತಪ್ರತಿಗಳ ಅಂತರ್ ನೆಲೆಗಳು.

೧.ಏಕ ನೆಲೆಯ ಹಸ್ತಪ್ರತಿಗಳು.

ಅ.ಶುದ್ಧ ಧಾರ್ಮಿಕ ಹಸ್ತಪ್ರತಿಗಳು.

ಬ.ಶುದ್ಧ ಲೌಕಿಕ ಹಸ್ತಪ್ರತಿಗಳು.

ಕ.ಶುದ್ಧ ಚಾರಿತ್ರಿಕ ಹಸ್ತಪ್ರತಿಗಳು.

ಡ.ಶುದ್ಧ ಕಾಲ್ಪನಿಕ ಹಸ್ತಪ್ರತಿಗಳು.

೨.ಅನ್ಯಾಂಶಗಳನ್ನೊಳಗೊಂಡ ಹಸ್ತಪ್ರತಿಗಳು.

ಅ. ಧರ್ಮದ ಜೊತೆಗೆ ಕಾವ್ಯ ಹೇಳುವ ಕೃತಿಗಳು.

ಬ. ಧರ್ಮದ ಜೊತೆಗೆ ಚರಿತ್ರೆ ಹೇಳುವ ಕೃತಿಗಳು.

ಅಧ್ಯಾಯ-ನಾಲ್ಕು

ಹಸ್ತಪ್ರತಿಗಳ ತೌಲನಿಕ ಅಧ್ಯಯನ.

೧. ಹಸ್ತಪ್ರತಿಗಳ ಸಮಾನ ಅಂಶಗಳು.

೨. ಹಸ್ತಪ್ರತಿಗಳ ಭಿನ್ನ ಅಂಶಗಳು.

೩. ಹಸ್ತಪ್ರತಿಗಳ ವಿಶಿಷ್ಟ ಅಂಶಗಳು.

ಅಧ್ಯಾಯ- ಐದು

ಸಮಾರೋಪ.

ಗ್ರಂಥಋಣ.

## ಅಧ್ಯಾಯ ಒಂದು

## ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

ಕನ್ನಡ ಹಸ್ತಪ್ರತಿಗಳು ಸಾಗಿ ಬಂದಿರುವ ಚಾರಿತ್ರಿಕ ಹೆಜ್ಜೆ ಗುರುತುಗಳನ್ನು ತಿಳಿಯುವ ಪ್ರಯತ್ನ ಬಹುಶಃ ಕನ್ನಡದಲ್ಲಿ ನಡೆದಿಲ್ಲ. ಆದರೆ ಬೇರೆ ಬೇರೆ ಶಿಸ್ತುಗಳಿಗೆ ಹಸ್ತಪ್ರತಿಗಳ ಅಧ್ಯಯನವನ್ನು ಒಳಪಡಿಸಿದ್ದು ಮಾತ್ರ ಹೊಸಮಾದರಿಯ ಪ್ರತೀಕವಾಗಿದೆ. ಅಂದರೆ ಆಧುನಿಕ ಕಾಲದಂತೆ ಒಂದು ಹಸ್ತಪ್ರತಿಯ ರಚನೆಯ ಹಿಂದೆಯೇ ಅದು ಕಟ್ಟಿಕೊಡುವ ಸಾಮಾಜಿಕ, ಸಾಂಸ್ಕೃತಿಕ ವಿವರಗಳನ್ನು ಸಾಹಿತ್ಯಿಕ ಪರಿಸರದ ಹಿನ್ನೆಲೆಯಲ್ಲಿ ನೋಡುವ ಮಾದರಿಹಳೆಯಕನ್ನಡ ಸಾಹಿತ್ಯದಲ್ಲಿ ನಡೆಯಲಿಲ್ಲ. ಇದಕ್ಕೆ ಸುಮಾರು ೧೮-೧೯ನೆಯ ಶತಮಾನದವರೆಗೂ ಸಮಗ್ರವಾಗಿಹಳೆಯ ಸಾಹಿತ್ಯ ಪರಂಪರೆಯ ಪ್ರಧಾನ ಆಕರಗಳಾದ ಹಸ್ತಪ್ರತಿಗಳು ಲಭ್ಯವಾಗದಿರುವುದು ಒಂದು ಕಾರಣವಾದರೆ,ಒಂದು ಕೃತಿ ಹುಟ್ಟಿಕೊಳ್ಳುವ ಸಾಂಸ್ಕೃತಿಕ ಸಂದರ್ಭವನ್ನು ನೂತನ ಮಾದರಿಯಲ್ಲಿ ತಿಳಿಯುವ ಪ್ರಯತ್ನವನ್ನು ನಮ್ಮ ಹಿಂದಿನ ಕೃತಿ ರಚನೆಕಾರರು, ಬೆಳೆಸಿಕೊಳ್ಳದಿರುವದು ಇನ್ನೊಂದು ಕಾರಣ. ಅವರದೇನಿದ್ದರೂ ಸಿದ್ಧ ಮಾದರಿಯರಚನೆಯಾಗಿತ್ತು. ಸಂಸ್ಕೃತ ಪ್ರಾಕೃತದಲ್ಲಿರುವ ಪ್ರತಿಗಳಿಗೆ ಟೀಕೆ ವ್ಯಾಖ್ಯಾನಗಳನ್ನು ಬರೆಯುವುದು. ಅಲ್ಲಿರುವ ಕಥೆ,ಮಹಾಕಾವ್ಯಗಳನ್ನು ಕನ್ನಡೀಕರಣಗೊಳಿಸುವುದು, ಮತ್ತು ಬೇರೆ ಬೇರೆ ರೂಪ ಹಾಗೂ ವಿಷಯಗಳಲ್ಲಿ ಕಾವ್ಯ ರಚನೆಮಾಡುವ ಧ್ಯೇಯ ಗುಣವಾಗಿತ್ತು. ಆದರೆ ಇದಿಷ್ಟೆ ಅವರ ಧೋರಣೆಯಾಗಿರಲಿಲ್ಲ. ಸಾಮಾಜಿಕ ಪರಿಸರ, ಆಶಯ, ಅಭಿವ್ಯಕ್ತಿಗೆ ತಕ್ಕಂತೆ ಹೊಸ ಹೊಸ ವಿಷಯ ಹಾಗೂ ಅನುಭವಗಳಿಗೆ ರೂಪ ಕೊಡುತ್ತ ಮತ್ತು ಹಾಗೆ ಸೃಷ್ಟಿಯಾದ ವಿಷಯಗಳಿಗೆ ಹೊಸ ಹೊಸ ರೂಪಗಳನ್ನು ಸೃಷ್ಟಿಸುತ್ತಾ ಹೋದರು. ಈ ಬಗೆಯ ಸಾಂಪ್ರದಾಯಿಕ ಮನೋಧರ್ಮ ಹಾಗೂಪ್ರಯೋಗ ರೂಪದ ಮನಸ್ಸು ಕನ್ನಡದಲ್ಲಿ ಅಸಂಖ್ಯಾತ ರೂಪ ಹಾಗೂ ಅನಂತ ವಿಷಯಗಳನ್ನೊಳಗೊಂಡ ಹಸ್ತಪ್ರತಿಗಳುಹುಟ್ಟಿಕೊಳ್ಳುವುದಕ್ಕೆ ಸಾಧ್ಯವಾಯಿತು. ಹೀಗಾಗಿ ಅವರದು ಪ್ರಧಾನವಾಗಿ ಸೃಷ್ಟಿ ಕಾರ್ಯವಾದರೆ ನಮ್ಮದು ಅದಕ್ಕೆ ಪರ್ಯಾಯವಾಗಿ ಹುಟ್ಟಿಕೊಂಡ ಶೋಧನ ಮತ್ತು ತಾತ್ವಿಕ ವಿಶ್ಲೇಷಣೆಯ ಕಾರ್ಯವಾಯಿತು.

ಹೀಗೆ ನಮ್ಮ ಸಮಕಾಲೀನವಲ್ಲದ ಸಾಹಿತ್ಯ ರೂಪ ಹಾಗೂ ವಿಷಯಗಳನ್ನೊಳಗೊಂಡ ಕನ್ನಡ ಹಸ್ತಪ್ರತಿಗಳನ್ನು ಅವುಗಳ ವಿಷಯ ವೈವಿಧ್ಯ ಮತ್ತು ಸಂಪತ್ತಿನ ಹಿನ್ನೆಲೆಯಲ್ಲಿ ಆಧುನಿಕ ಅಧ್ಯಯನ ಮಾದರಿಗಳ ಒಡಲಿನಲಿಟ್ಟುಅಧ್ಯಯನಿಸುವ ಕ್ರಮವೊಂದನ್ನು ಪ್ರಸ್ತುತ ಪ್ರಬಂಧ ನಿರ್ವಹಿಸಿದೆ. ಪ್ರಬಂಧ ತನ್ನೊಳಗೆ ಅಸಾಮಾನ್ಯವಾಗಿರುವ ಇಡೀಕನ್ನಡದ ಹಸ್ತಪ್ರತಿಗಳನ್ನು ಒಳಗೊಳ್ಳದೆ ಪ್ರಾತಿನಿಧಿಕವಾದ ಹಸ್ತಪ್ರತಿಗಳನ್ನು ವಿವೇಚಿಸುವುದರ ಮೂಲಕ ರೂಪ ಹಾಗೂವಿಷಯಗಳ ಚರ್ಚೆಯನ್ನು ನಿಭಾಯಿಸಿದೆ.

ಶಾಸ್ತ್ರ ಸಾಹಿತ್ಯದ ಅಧ್ಯಯನ ಸಹಜವಾಗಿ ಜಟಿಲವಾದದ್ದು. ಅದರಲ್ಲೂ ಹಸ್ತಪ್ರತಿಗಳಂತ ಪ್ರಾಚ್ಯ ವಸ್ತುಗಳ ಅಧ್ಯಯನ ಇನ್ನೂ ಕಠಿಣವಾದದ್ದು. ಯಾಕೆಂದರೆ ಹಸ್ತಪ್ರತಿಯು ಮುಂದುವರಿಕೆಯ ಹಂತವಾದ ಗ್ರಂಥಸಂಪಾದನೆ ಕುರಿತು ಕನ್ನಡದಲ್ಲಿ ಸಾಕಷ್ಟು ಕೆಲಸವಾಗಿದ್ದರೂ ಹಸ್ತಪ್ರತಿ ಕುರಿತಾದ ಅಧ್ಯಯನ ಮಾದರಿಗಳು ಹೆಚ್ಚು ಆಕರ ನೆಲೆಯಲ್ಲಿ ನಡೆದಿಲ್ಲ. ಆ ಬಗೆಯ ಮಾದರಿಯೊಂದನ್ನು ನಿರ್ವಹಿಸುವ ಉದ್ದೇಶದಿಂದ ಮತ್ತು ಮೊದಲಿನಿಂದಲೂ ಆಸಕ್ತಿಯ ಕ್ಷೇತ್ರವಾದ ಈ ವಿಷಯವನ್ನು ಅಧ್ಯಯನ ವಸ್ತುವಾಗಿ ಆಯ್ಕೆ ಮಾಡಿಕೊಂಡಿದ್ದೇನೆ. ಹಸ್ತಪ್ರತಿ ರಚನೆಗೆ ಅಗತ್ಯವಾದ ಕಾರಣಗಳನ್ನು ಶೋಧಿಸುವುದರ ಮೂಲಕ ಕಾಲದಿಂದ ಕಾಲಕ್ಕೆ ಬೇರೆ ಬೇರೆ ಆಯಾಮಗಳನ್ನು ಪಡೆದುಕೊಂಡ ಹಸ್ತಪ್ರತಿಗಳ ಮನೋಧರ್ಮವನ್ನು ವಿವರಿಸುವ ಪ್ರಯತ್ನವನ್ನು ಮಾಡಲಾಗಿದೆ.

ಪ್ರಸ್ತುತ ಅಧ್ಯಯನ ಪ್ರೌಢ ಪ್ರಬಂಧವಾಗಿದ್ದರಿಂದ ಕೆಲವು ಪರಿಮಿತಿಗಳಗೆ ಬದ್ಧವಾಗಿದೆ. ಸಾಧ್ಯವಾದ ಮಟ್ಟಿಗೆಕನ್ನಡ ಹಸ್ತಪ್ರತಿಗಳಲ್ಲಿ ಬಳಕೆಯಾದ ಎಲ್ಲ ರೂಪಗಳನ್ನು ಗಮನಿಸಲಾಗಿದೆ. ಇಲ್ಲಿ ಕಾಲದ ಪರಿಮಿತಿಯನ್ನು ನಿರ್ಧಿಷ್ಟವಾಗಿ ಹಾಕಿಕೊಂಡಿಲ್ಲ. ಯಾಕೆಂದರೆ ರೂಪ ಮತ್ತು ವಿಷಯಗಳು ಕಾಲಕಾಲಕ್ಕೆ ಬದಲಾಗುತ್ತ ಬಂದಿವೆ.ಪ್ರಾಚೀನ ಕಾಲದಿಂದ ಆಧುನಿಕದವರಿಗೆ ಈ ವ್ಯತ್ಯಾಸ ಸಾಗಿದೆ. ಪ್ರಾಚೀನ ಕಾಲದಿಂದ ಕ್ರಿ.ಶ.೧೭-೧೮ ನೇ ಶತಮಾನದವರಗೂ ಆಯಾ ಸಂದರ್ಭಕ್ಕೆ ತಕ್ಕಂತೆ ಹಸ್ತಪ್ರತಿಗಳನ್ನು ಗಮನಿಸಲಾಗಿದೆ. ಹೀಗೆ ನಿರೂಪಿಸುವಾಗಹಸ್ತಪ್ರತಿಗಳನ್ನು ಪ್ರಾತಿನಿಧಿಕವಾಗಿ ಬಳಸಿಕೊಳ್ಳಲಾಗಿದೆ. ಹಾಗೆ ಆಯ್ಕೆ ಮಾಡಿಕೊಂಡಿರುವ ಹಸ್ತಪ್ರತಿಗಳನ್ನು ದಾಖಲಿಸುವ ಪ್ರಯತ್ನವನ್ನಿಲ್ಲಿ ಮಾಡಿದ್ದೇನೆ.

ಕನ್ನಡ ಹಸ್ತಪ್ರತಿಗಳು ಕಾಲದಿಂದ ಕಾಲಕ್ಕೆ ವೈವಿಧ್ಯಮಯವಾಗಿ ಬೆಳೆದು ಬಂದಿರುವ ಮತ್ತು ಅವುಗಳ ವಿಪುಲಸಾಮಗ್ರಿಯಿಂದ ಕನ್ನಡ ಸಾಹಿತ್ಯ ಚರಿತ್ರೆಯ ಸ್ವರೂಪವನ್ನು ಗುರುತಿಸುವ ಪ್ರಯತ್ನವೇ ಈ ಅಧ್ಯಯನದ ಉದ್ದೇಶ.ಬಹಳ ಪ್ರಾಚೀನ ಕಾಲದಿಂದಲೆ ಸಾಹಿತ್ಯ ನಿರ್ಮಿತಿಗೆ ತೊಡಗಿದ ಬೇರೆ ಬೇರೆ ವರ್ಗಗಳ ಅನೇಕ ಕವಿಗಳಿಂದ ರಚಿತಗೊಂಡ ಹಸ್ತಪ್ರತಿಗಳು ಕನ್ನಡ ಸಾಹಿತ್ಯದ ಚಾರಿತ್ರಿಕ ಬೆಳವಣಿಗೆಯ ಜೊತೆಗೆ ಅದು ಕಾಲಕಾಲಕ್ಕೆ ವ್ಯತ್ಯಾಸಗೊಂಡ ರೂಪ ಪಡೆದಪ್ರೇರಣೆ ಈ ಬದಲಾವಣೆಗೆ ಕಾರಣವಾದ ಸಾಂಸ್ಕೃತಿಕ ವೈಪರಿತ್ಯಗಳು ಅವು ಉಂಟು ಮಾಡಿದ ಪರಿಣಾಮಗಳಲ್ಲದೆ ಸಾಹಿತ್ಯದ ಅಭಿಜಾತತೆಯನ್ನೂ ಅಭಿವ್ಯಕ್ತಿಸುತ್ತವೆ. ಇದರಿಂದ ಪರಂಪರೆಯ ಸತ್ವವನ್ನು ಹೀರಿಕೊಂಡು ಬೆಳೆದ ಕನ್ನಡಹಸ್ತಪ್ರತಿಗಳು ಆಯಾಕಾಲದ ಸಮಾಜೋ-ಸಾಹಿತ್ಯಿಕ ಸ್ವರೂಪವನ್ನು ತಿಳಿಸುವ ಸಾಂಸ್ಕೃತಿಕ ಆಕರಗಳಾಗಿವೆ. ಪ್ರಾರಂಭದಿಂದ ಈ ವರೆಗೆ ನಿರಂತರವಾಗಿ ನಡೆದುಬಂದಿರುವ ಕನ್ನಡ ಸಾಹಿತ್ಯ ಕ್ರಿಯೆಯನ್ನು ಹಸ್ತಪ್ರತಿ ವಿಷಯ ಸಂಪತ್ತು ಎಂತಲೇ ಸ್ಪಷ್ಟಪಡಿಸಿಕೊಂಡು ಆ ಮಾದರಿಯಲ್ಲಿ ಅಧ್ಯಯನವಿಧಾನಗಳನ್ನು ರೂಪಿಸಿಕೊಂಡು ಪ್ರಬಂಧವನ್ನು ರಚಿಸಿದ್ದೇನೆ.

### ಅಧ್ಯಯನದ ವಿಧಾನಗಳು:

ಕರ್ನಾಟಕದ ವಿವಿಧ ಧರ್ಮಗಳಲ್ಲಿ ಮುಖ್ಯವಾಗಿ ಜೈನ,ವೀರಶೈವ ಹಾಗೂ ಬ್ರಾಹ್ಮಣ ಸಮುದಾಯಗಳಲ್ಲಿ ವೈವಿಧ್ಯಮಯ ವಿಷಯಗಳಲ್ಲಿ ರೂಪಗೊಂಡ ಹಸ್ತಪ್ರತಿಗಳನ್ನು ವಿವೇಚಿಸುವದರ ಜೊತೆಗೆ ಅವುಗಳನ್ನು ಅಂತರ್ ಶಿಸ್ತೀಯವಾಗಿಯೂ ವಿವೇಚಿಸಲಾಗಿದೆ. ರೂಪ ಹಾಗೂ ವಿಷಯ ಎರಡನ್ನು ಏಕನೆಲೆಯಲ್ಲಿ ಅಧ್ಯಯನಿಸುತ್ತಾ ವಿವಿಧಅಧ್ಯಾಯಗಳಲ್ಲಿ ಈ ವಿಷಯವನ್ನು ಸಂಗ್ರಹಿಸಲಾಗಿದೆ. ಹಸ್ತಪ್ರತಿಗಳು ಒಳಗೊಂಡಿರುವ

ಪಠನೆಲೆಯ ಮತ್ತು ಅನ್ಯಾಂಶದ ಶಿಸ್ತುಗಳು ಕೂಡಾ ಈ ವ್ಯಾಪ್ತಿಗೊಳಪಟ್ಟಿವೆ. ಹಸ್ತಪ್ರತಿಗಳಿಗಿರುವ ಸಮಾನ ಭಿನ್ನ ಮತ್ತು ವಿಶಿಷ್ಟಾಂಶಗಳನ್ನು ವಿವೇಚಿಸುತ್ತಾ ಒಟ್ಟು ಸಾಂಸ್ಕೃತಿಕ ಅನನ್ಯತೆಯನ್ನು ಕಂಡುಕೊಳ್ಳವ ಪ್ರಯತ್ನ ಮಾಡಿದ್ದೇನೆ. ಒಟ್ಟಾರೆ ಅಧ್ಯಯನ ಸಮಗ್ರವಲ್ಲದಿದ್ದರೂ ಹಸ್ತಪ್ರತಿಯೊಂದನ್ನು ಸಮಕಾಲಿನ ತುರ್ತಿನಲ್ಲಿಟ್ಟು ಅಧ್ಯಯನಿಸುವ ಒಂದು ಮಾದರಿಯನ್ನುಕಾಣುವ ಪ್ರಯತ್ನವನ್ನು ಇದರ ಮೂಲಕ ನಿರ್ವಹಿಸಿದ್ದೇನೆ.ಅಧ್ಯಯನ ವಿಧಾನದ ಸ್ಥೂಲ ವಿವರಣೆಯನ್ನು ಹೀಗೆ ಸಂಗ್ರಹಿಸಬಹುದು.

ಕನ್ನಡ ಹಸ್ತಪ್ರತಿಗಳ ವಿಷಯ ಸಂಪತ್ತು ಮತ್ತು ರೂಪ ವೈವಿಧ್ಯ ಎರಡು ನಿಜಕ್ಕೂ ಬೆರಗಾಗುವಂತೆ ಬೆಳೆದು ಬಂದಿವೆ. ಇದಕ್ಕೆ ಬಹುಮುಖ್ಯ ಕಾರಣವೆಂದರೆ ಧಾರ್ಮಿಕವಾದ ಸಂಬಂಧ. ಕನ್ನಡ ಸಾಹಿತ್ಯ ನಿರ್ಮಿತಿಗೆ ಮೂಲಪ್ರೇರಣೆಗಳಲ್ಲೊಂದಾದ ಧರ್ಮ ಅದರ ಸೃಜನಶೀಲ ಕ್ರಿಯೆಗೆ ತನ್ನ ಒತ್ತಾಸೆಯನ್ನು ನೀಡಿದೆ. ಆಯಾ ಧರ್ಮದ ಪ್ರಧಾನಯುಗದಲ್ಲಿ ಬೇರೆ ಧರ್ಮದ ಕೃತಿಗಳೂ ಹುಟ್ಟಿಕೊಂಡಿವೆ. ಇದರಿಂದಾಗಿ ಕನ್ನಡ ಹಸ್ತಪ್ರತಿ ಸಂಪತ್ತನ್ನು ಬೆಳೆಸುವಮಾರ್ಗದಲ್ಲಿ ಅನೇಕ ಕವಿಗಳು ಧರ್ಮಗಳ ಪರವಾಗಿ ದುಡಿದಿದ್ದಾರೆ. ಆರಂಭದ ಕವಿಗಳಾದ ಜೈನರ ಹಸ್ತಪ್ರತಿಗಳು ಸದ್ಯದ ಉಪಲಬ್ಧ ಪ್ರಾಚೀನ ಕೃತಿ ಶ್ರೇಣಿಗೆ ಸೇರುತ್ತವೆ. ಅವರು ತೀರ್ಥಂಕರರ ಪುರಾಣಗಳನ್ನು, ತಾತ್ವಿಕ ಕೃತಿಗಳನ್ನುಲೌಕಿಕ ಅಲೌಕಿಕ ಕಾವ್ಯಗಳನ್ನು ರಚಿಸಿದರು. ಮುಂದೆ ೧೨ನೆಯ ಶತಮಾನಕ್ಕೆ ವೀರಶೈವಯುಗ ಪ್ರಾರಂಭವಾಯಿತು. ಶಿವಶರಣರು ತಮ್ಮ ವಚನಗಳ ಮೂಲಕ ತಮ್ಮ ಅನುಭವ ಅಧ್ಯಾತ್ಮ ತತ್ವಜ್ಞಾನಗಳನ್ನು ಚಿತ್ರಿಸಿದರು. ನಂತರ ಹರಿಹರ ರಾಘವಾಂಕಾದಿ ಕವಿಗಳು ಶಿವಲೀಲೆ, ಶಿವಶರಣರ ಚರಿತ್ರೆ, ಧರ್ಮ, ತತ್ವಗಳನ್ನು ತಮ್ಮ ಕಾವ್ಯಗಳಿಗೆ ವಸ್ತುಗಳನ್ನಾಗಿ ಸ್ವೀಕರಿಸಿ ರಗಳೆ, ಷಟ್ಪದಿ ರೂಪಗಳನ್ನು ಜಾರಿಗೆ ತಂದರು.ಬ್ರಾಹ್ಮಣ ಕವಿಗಳು ಭಾರತ, ಭಾಗವತ, ರಾಮಾಯಣಗಳಿಂದ ವಸ್ತುಗಳನ್ನು ಆಯ್ದುಕೊಂಡು ಷಟ್ಪದಿ, ಸಾಂಗತ್ಯ, ಕೀರ್ತನರೂಪದಲ್ಲಿ ಕೃತಿ ರಚಿಸಿದರು. ಹೀಗಾಗಿ ಒಟ್ಟು ಕನ್ನಡದ ಹಸ್ತಪ್ರತಿಗಳು "ಮೂರು ಮತದ ಕವಿಗಳ ತ್ರಿವೇಣಿ ಸಂಗಮವೆನಿಸಿತು". ಈ ಪರಂಪರೆ ಇನ್ನು ಮುಂದುವರೆದು ೧೯ನೇ ಶತಮಾನದ ಆಧುನಿಕದ ಹೊತ್ತಿಗೆ ಕ್ರೈಸ್ತಮತಕ್ಕೆ ಸಂಬಂಧಿಸಿದ ಕೃತಿಗಳು ನಿರ್ಮಾಣಗೊಳ್ಳುವುದಕ್ಕೆ ಸಾಧ್ಯವಾಯಿತು.

ಈ ಪರಂಪರೆಗೆ ಎರಡನೆಯ ಬಹುಮುಖ್ಯ ಕಾರಣವೆಂದರೆ ಸಾಹಿತ್ಯ ಮತ್ತು ಸಮಾಜಗಳ ನಡುವಿನ ಸಂಬಂಧ. ಇದನ್ನೆ ಇನ್ನಷ್ಟು ವಿಸ್ತರಿಸಿ ಹೇಳುವುದಾದರೆ ಪ್ರಯೋಗ ಮತ್ತು ಅಭಿವ್ಯಕ್ತಿಗಳ ಸಂಬಂಧ. ಬಸವರಾಜ ಕಲ್ಗುಡಿ ಅವರುಹೇಳುವಂತೆ "ಸಾಹಿತ್ಯದಲ್ಲಿ ರೂಪಗೊಳ್ಳುವ ವಸ್ತುವಿಗೂ ಮತ್ತು ಅಂದಿನ ಸಮಾಜಕ್ಕೂ ನಡುವೆ ಎಂಥ ಸಂಬಂಧಗಳು ಇರಬೇಕು ಎನ್ನುವ ಪ್ರಶ್ನೆಯೊಡನೆ ಸಾಹಿತ್ಯ ರಚನೆ ಹಾಗೂ ಸಮಾಜದ ನಡುವಿನ ಸಂಬಂಧಗಳು ಹಳತೊಡಗುತ್ತವೆ."(೧೯೮೨,೨೬) ಕನ್ನಡ ಹಸ್ತಪ್ರತಿಗಳು ಸಾಮಾಜಿಕ ರಚನೆಯ ಒಳಗಿದ್ದುಕೊಂಡೆ ಅನೇಕ ಪ್ರಯೋಗಗಳ ಹಿನ್ನೆಲೆಯಲ್ಲಿನಿರ್ಮಿತಿಗೊಂಡಿವೆ. ಆದ್ದರಿಂದ ಅವುಗಳ ವಿಷಯ ಮತ್ತು ರೂಪ ಅನೇಕ ಬಗೆಯಲ್ಲಿ ವ್ಯಕ್ತವಾಗಲು ಸಮಕಾಲೀನ ಸಾಮಾಜಿಕ ಸಂಬಂಧದ ಆಶಯ ಮತ್ತು ಸಂದರ್ಭಗಳೇ ಪ್ರಧಾನ ಕಾರಣ. ಇಷ್ಟಾದರೂ ಕೂಡಾ ಒಂದೊಂದು ರೂಪದಲ್ಲಿಅಡಕವಾಗಿರುವ ಆಶಯವನ್ನು ಇಷ್ಟೆ ಎಂದು ನಿಗದಿಪಡಿಸುವದು ಕೂಡಾ ಒಮ್ಮೊಮ್ಮೆ ಸಾಧ್ಯವಾಗದು. ಈ ಚರ್ಚೆ ಮುಂದಿನ ಅಧ್ಯಾಯಗಳಲ್ಲಿ ವಿಸ್ತರಿಸಿಕೊಂಡಿದೆ.

ಹೀಗೆ ವಿವಿಧ ಕಾರಣ ಪರಿಸರಗಳ ಹಿನ್ನೆಲೆಯಲ್ಲಿ ರಚನೆಗೊಂಡ ಹಸ್ತಪ್ರತಿಗಳು ತಮ್ಮ ವಸ್ತುವಿನ್ಯಾಸವನ್ನು
ಹಲವಾರು ಕವಲುಗಳಲ್ಲಿ ವಿಸ್ತರಿಸಿಕೊಂಡು ಸಾಗಿವೆ."ಒಂದು ರೂಪಕ್ಕೆ ಒಂದೇ ವಿಷಯ" ಅಥವಾ ಈ
ವಿಷಯಕ್ಕೆ ಇದೇ ರೂಪವನ್ನು ವಿಚಿತ್ರತೆಯನ್ನು ಮೀರಿ ತಿಳಿಯಾದ ನೀರು ಇಳಿಜಾರಿಗೆ ನುಗ್ಗುವಂತೆ ಕನ್ನಡ
ಹಸ್ತಪ್ರತಿ ವಿಷಯ ಮುನ್ನುಗ್ಗಿದೆ. ಸಮಾಜದ, ಜನಜೀವನದ ಆಲೋಚನೆಗಳು, ಚಿಂತನೆಗಳು, ಸಾಂಸ್ಕೃತಿಕ
ವಿವರಗಳು ಅಲ್ಲಿ ಮೂರ್ತರೂಪವಾಗಿ ಮೈದಳೆದಿವೆ. ಧರ್ಮ ಹಾಗೂ ಸಮಾಜದೊಂದಿಗೆ ಸಂಬಂಧ
ಹೊಂದುತ್ತಲೆ ಸಾಹಿತ್ಯಕ್ಕೆ ಸ್ಫೂರ್ತಿ ಚೈತನ್ಯ ಮತ್ತು ಉಸಿರನ್ನು ನೀಡಿವೆ.

ಧಾರ್ಮಿಕ, ಲೌಕಿಕ, ಪುರಾಣ, ಚರಿತ್ರೆ, ಭವಾವಳಿ, ಪಂಚಕಲ್ಯಾಣ, ಪಂಚಾಚಾರ, ಪಂಚಭಾವ, ಶಿವಲೀಲೆ
ತೀರ್ಥಂಕರ ಚರಿತ್ರೆ, ೬೩ ಪುರಾತನರ ಚರಿತೆ, ತ್ರಿಷಷ್ಠಿಶಲಾಕ ಪುರುಷರ ಚರಿತೆ, ರಾಮಾಯಣ, ಭಾರತ,
ಭಾಗವತ, ಹರಿಲೀಲೆ, ಸಾಮಾಜಿಕ ನೀತಿಗಳೆಲ್ಲ ವಿಷಯ ವ್ಯಾಪ್ತಿಯಲ್ಲಿ ಆಕಾರ ಪಡೆದರೆ ಚಂಪೂ, ವಚನ,
ರಗಳೆ,ಷಟ್ಪದಿ, ತ್ರಿಪದಿ, ಸಾಂಗತ್ಯ, ಶತಕ, ಅಷ್ಟಕ, ಕೀರ್ತನೆ, ತಾರಾವಳಿ, ಜಾವಳಿ, ಉಗಾಭೋಗ ಸ್ವರವಚನ
ಇತ್ಯಾದಿ ನೂರಾರು ಹಸ್ತಪ್ರತಿ ಪ್ರಕಾರಗಳು ರೂಪ ವೈವಿಧ್ಯಕ್ಕೆ ಉದಾಹರಣೆಗಳಾಗಿವೆ. ರೂಪದ ದೃಷ್ಟಿಯಿಂದ
ನಿರ್ಮಾಣಗೊಂಡ ಹಸ್ತಪ್ರತಿಗಳು ಕನ್ನಡ ಸಾಹಿತ್ಯದ ಭಾಷಿಕ, ರಾಚನಿಕ ಸ್ವರೂಪವನ್ನು; ವಿಷಯದ
ಹಿನ್ನೆಲೆಯಲ್ಲಿ ರೂಪಗೊಂಡ ಹಸ್ತಪ್ರತಿಗಳು ಸಾಹಿತ್ಯಿಕ ಸ್ವರೂಪವನ್ನು ಪ್ರತಿನಿಧಿಸುತ್ತವೆ. ಈ ನೆಲೆಯಿಂದಾಗಿ
ಒಂದು ಹಸ್ತಪ್ರತಿ ಏಕಕಾಲಕ್ಕೆ ವಸ್ತು ಹಾಗೂ ರೂಪ ವೈವಿಧ್ಯವನ್ನು ಪಡೆದುಕೊಂಡು ನಿರ್ಮಾಣಗೊಂಡಿರುವ
ಸಾಧ್ಯತೆಗಳಿವೆ.

ಕನ್ನಡದಲ್ಲಿ ದೊರೆತ ಮೊದಲ ಕೃತಿ ಕವಿರಾಜಮಾರ್ಗ. ಒಂದು ಲಕ್ಷಣ ಗ್ರಂಥ. ಯಾವುದೇ ಭಾಷೆಯಲ್ಲಿ
ಒಂದುಲಕ್ಷಣ ಕೃತಿ ಹುಟ್ಟಿಕೊಳ್ಳಬೇಕಾದರೆ ಅದಕ್ಕೂ ಹಿಂದೆಯೇ ಆ ಭಾಷೆಯಲ್ಲಿ ವಿಪುಲವಾದ ಸಾಹಿತ್ಯ
ನಿರ್ಮಾಣವಾಗಿರಬೇಕು. ಕ್ರಿ.ಶ ೯ನೆಯ ಶತಮಾನದಷ್ಟು ಪ್ರಾಚೀನ ಕಾಲದಿಂದಲೇ ತಮ್ಮ ಸಾಹಿತ್ಯವನ್ನು
ವಿಶಿಷ್ಟ ಮಾದರಿಯಲ್ಲಿ ನಿರ್ಮಿಸಿ ರೂಪಿಸಿಕೊಂಡು ಬಂದ ಜೈನ ಆಚಾರ್ಯರ ತೀರ ಮೊದಲಿನ
ಕೃತಿಗಳುಪ್ರಾಕೃತದಲ್ಲಿವೆ, ನಂತರ ಸಂಸ್ಕೃತದಲ್ಲಿವೆ. ಇವುಗಳಲ್ಲಿ ಅನೇಕ ಕೃತಿಗಳು ಜೈನಧರ್ಮ ಹಾಗೂ
ತತ್ವಗಳನ್ನು ಪ್ರತಿಪಾದಿಸುತ್ತವೆ. ಈ ಪರಂಪರೆಯನ್ನು ಮುನ್ನಡೆಸುವ ಕಾರಣವಾಗಿ ಪ್ರಾಕೃತ ಮತ್ತು
ಸಂಸ್ಕೃತದಲ್ಲಿರುವ ಅಮೂಲ್ಯ ಕೃತಿಗಳನ್ನು ಜೈನ ಕವಿಗಳು ಕನ್ನಡದ ಮೂಲಕ ಜನತೆಗೆ ಒದಗಿಸಿದ್ದಾರೆ.
ಹೀಗಾಗಿ ಕನ್ನಡ ಹಸ್ತಪ್ರತಿಗಳ ನಿರ್ಮಾಣ ಮತ್ತು ಪರಂಪರೆ ಅಧಿಕೃತವಾಗಿ ಜೈನರಿಂದಲೇ ಪ್ರಾರಂಭವಾಯಿತು.
ಮುಂದೆ ಇಂಥದೇ ಪರಂಪರೆ ವೀರಶೈವರಲ್ಲಿ ಮುನ್ನಡೆದು ಸಂಸ್ಕೃತದಲ್ಲಿ ರಚಿತವಾದ ನಿಘಂಟು ಜೋತಿಷ್ಯ,
ಕಲ್ಪ ಮುಂತಾದ ಸಾಹಿತ್ಯೇತರ ಶಾಸ್ತ್ರ ಕೃತಿಗಳಿಗೆ ಬೇರೆ ವ್ಯಾಖ್ಯಾನಗಳಂತ ಹಸ್ತಪ್ರತಿಗಳು ನಿರ್ಮಾಣವಾದವು.
ಉದಾ: ಕ್ರಿ.ಶ ೧೪೩೦ರಲ್ಲಿ ಗುಬ್ಬಿ ಮಲ್ಲಣಾರ್ಯ ಸಂಸ್ಕೃತದಲ್ಲಿ ವರರುಚಿ ಎಂಬಾತ ೩೭ನೇ ಶ್ಲೋಕ
ಪರಿಮಿತಯುಳ್ಳ ಏಕಾಕ್ಷರ ನಿಘಂಟು ಎಂಬ ಸಣ್ಣಕೋಶ ರಚಿಸಿದ. ಈ ಕೃತಿಗೆ ಗುಬ್ಬಿಯ ಮಲ್ಲಣಾರ್ಯ
ಅಥವಾ ಮಲ್ಲಿಕಾರ್ಜುನ ಕವಿ ಕನ್ನಡದಲ್ಲಿ ಟೀಕೆ ಬರೆದ.

ಜೈನರು ರಾಮಾಯಣ, ಮಹಾಭಾರತ ಮತ್ತು ಪರಂಪರೆಯಿಂದ ಜನರಲ್ಲಿ ನಡೆದು ಬಂದ ದಂತಕತೆಗಳನ್ನು
ಆಧರಿಸಿ ಲೌಕಿಕ ಕಾವ್ಯಗಳನ್ನು ಬರೆದರು. ಪಂಪ, ಪೊನ್ನ, ರನ್ನ, ಜನ್ನ ಮುಂತಾದ ಜೈನ ಕವಿಗಳಿಂದ

ರಚಿತಗೊಂಡ ಹಸ್ತಪ್ರತಿಗಳು ಕನ್ನಡ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆಗಳು. ರಾಜರನ್ನು ಹೊಗಳುವ ಸಂದರ್ಭದಲ್ಲಿ ಲೌಕಿಕ ಮಾದರಿಯನ್ನು, ಧರ್ಮ ದೈವಭಕ್ತಿಯನ್ನು ಪ್ರಚಾರಗೊಳಿಸುವ ಸಂದರ್ಭದಲ್ಲಿ ಆಗಮಿಕ ಮಾದರಿಯನ್ನು ಪಂಪ ಕಂಡುಕೊಂಡ ತರುವಾಯ ಮುಂದಿನವರೆಲ್ಲ ಆ ರಾಜಮಾರ್ಗದಲ್ಲಿ ಹೆಜ್ಜೆ ಹಾಕಿದರು. ಹೀಗಾಗಿ ಜೈನ ಹಸ್ತಪ್ರತಿಗಳು ಚಂಪೂ, ಸಾಂಗತ್ಯ, ಗದ್ಯರೂಪದಲ್ಲಿ ನಿರ್ಮಾಣಗೊಳ್ಳವುದರ ಮೂಲಕ ಲೌಕಿಕ ಮತ್ತು ಅಲೌಕಿಕ ಎಂಬೆರಡು ಮಾದರಿಯ ವಿಷಯದಲ್ಲಿ ಕವಲೊಡೆದು ವಿಶಿಷ್ಟವೆನಿಸಿದವು.

ವೀರಶೈವ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಕೃತಿ ರಚನೆ ಕ್ರಿಶ೧೧-೧೨ನೇಯ ಶತಮಾನದಿಂದ ಆರಂಭವಾಗುತ್ತದೆ. ಮುಂದೆ ಅದು ಪ್ರೌಢ ಅನುಭಾವಿ ಕವಿಗಳಿಂದ ಬೆಳೆದು ೧೭-೧೮ನೆಯ ಶತಮಾನದವರೆಗೂ ನಿರಂತರವಾಗಿ ಸಾಗಿಬರುತ್ತದೆ. ರೂಪ ಹಾಗೂ ವಿಷಯ ದೃಷ್ಟಿಯಿಂದ ಹೊಸ ಪರಂಪರೆಯನ್ನು ನಿರ್ಮಿಸಿದ ಈ ಕಾಲಾವಧಿಯಲ್ಲಿ ರಚನೆಗೊಂಡ ಕೃತಿಗಳ ಸಂಖ್ಯೆ ಮತ್ತು ಅವುಗಳ ಹಸ್ತಪ್ರತಿಗಳ ಸಂಖ್ಯೆ ವಿಶಾಲವಾಯಿತು. ವೀರಶೈವ ಸಾಹಿತ್ಯ ಪರಂಪರೆ ದೇವರ ದಾಸಿಮಯ್ಯನಿಂದಲೇ ಆರಂಭಗೊಂಡಿದ್ದರ ಸೂಚನೆ ಬಸವಣ್ಣನ ವಚನವೊಂದರಲ್ಲಿ ದೊರೆಯುವುದರಿಂದಆರಂಭಕಾಲದ ದೇವರ ದಾಸಿಮಯ್ಯ, ಮಾದಾರಚನ್ನಯ್ಯ, ಡೋಹರ ಕಕ್ಕಯ್ಯ ಮೊದಲಾದವರು ವಚನರೂಪದ ಆದ್ಯರಾಗುತ್ತಾರೆ.

ಬಹುತೇಕ ವೀರಶೈವ ಹಸ್ತಪ್ರತಿಗಳು ಶಿವಪುರಾಣ, ಶಿವಶರಣದ ಚರಿತ್ರೆ, ಪಟಸ್ಥಲ/ ಅಷ್ಟಾವರಣ, ಪಂಚಾಚಾರಮುಂತಾದ ವೈವಿಧ್ಯಮಯ ವಿಷಯಗಳಲ್ಲಿ ರೂಪಗೊಂಡವು. ಇಂಥ ವಿಷಯಗಳನ್ನು ಅಭಿವ್ಯಕ್ತಗೊಳಿಸಲು ಅವರು ರೂಢಿಸಿಕೊಂಡ ರಚನಾಮಾದರಿಗಳೆಂದರೆ ಚಂಪೂ, ವಚನ, ರಗಳೆ, ಷಟ್ಪದಿ, ತ್ರಿಪದಿ, ಸಾಂಗತ್ಯ ಶತಕಗಳಲ್ಲದೆ ಹಲವಾರು ಉಪೇಕ್ಷಿತ ರೂಪಗಳನ್ನು ಕಂಡುಕೊಂಡು ಹೊಸಬಗೆಯ ಹಸ್ತಪ್ರತಿಗಳನ್ನವರು ರಚಿಸಿದರು. ಅಂತಹ ಉಪೇಕ್ಷಿತ ರೂಪಗಳೆಂದರೆ ಕಾಲಜ್ಞಾನ ಸಾಹಿತ್ಯ, ಮಂತ್ರಗೋಪ್ಯ ಸಾಹಿತ್ಯ, ಸ್ವರವಚನ ಸಾಹಿತ್ಯ, ಸಾಂಧ್ಯ-ಸ್ತೋತ್ರ, ದಂಡಕ ಸಾಹಿತ್ಯ, ಸೃಷ್ಟಿಯ ವಚನ ಸಾಹಿತ್ಯ, ಶತಕ, ತಾರಾವಳಿ ಇವೇ ಮುಂತಾದ ವೀರಶೈವ ಲಘು ಸಾಹಿತ್ಯ ಪ್ರಕಾರಗಳು. ಇದರಿಂದಾದ ಮಹತ್ವದ ಪರಿಣಾಮವೆಂದರೆ ಅದೂವರೆಗೂ ಸಾಂಪ್ರದಾಯಿಕ ಮನೋಧರ್ಮ ಹೊಂದಿದ್ದ ಸಾಹಿತ್ಯಕ್ಕೆ ಚಲನಶೀಲ ಆಯಾಮಗಳು ಒದಗಿದವು. ಹಿಂದಿನ ಸ್ಥಾಪಿತ ರೂಪಗಳು ಹೇಳಲಿಕ್ಕಾಗದ ಅನೇಕ ವಿಷಯಗಳನ್ನು ಬೇರೆ ಮಾದರಿ ಮತ್ತು ದೃಷ್ಟಿಕೋನಗಳಿಂದ ಹೊಸ ಹೊಸ ವಿಷಯಗಳನ್ನು ಈ ರೂಪಗಳು ನಿರೂಪಿಸಿದವು. ಏಕರೂಪದ ಸಾಹಿತ್ತಿಕ ಧೋರಣೆಯಿಂದ ಬೇಸತ್ತಿದ್ದ ಸಮುದಾಯ ತನ್ನೊಳಗಿನ ಕವಿ ಪ್ರತಿಭೆಗಳನ್ನು ಸಾಹಿತ್ಯ ರಚನೆಯಲ್ಲಿ ತೊಡಗಿತ್ತು. ಬಹುಮುಖ್ಯ ಸಂಗತಿಯೆಂದರೆ ಈ ಉಪೇಕ್ಷಿತ ರೂಪಗಳು ಏಕಕಾಲದಲ್ಲಿ ಅಭಿವ್ಯಕ್ತಗೊಳ್ಳದೆ ಬೇರೆ ಬೇರೆ ಸಂದರ್ಭ ಹಾಗೂ ಸನ್ನಿವೇಶಗಳಲ್ಲಿ ರೂಪತಾಳಿದವು. ಉಪಲಬ್ಧ ಕೃತಿರೂಪದ ರಚನೆಗಳಲ್ಲಿ ಕೊಂಡಗುಳಿ ಕೇಶಿರಾಜನ(ಕ್ರಿ.ಶ. ೧೧೦೭-೧೧೩೨) ಮಂತ್ರಮಹತ್ವದ ಕಂದ, ಲಿಂಗಸೋತ್ರದ ಕಂದ, ನವರತ್ನ ಮಾಲೆಗಳು ಲಭಿಸಿದ್ದು ಅವು ಕಂದ ವೃತ್ತದಲ್ಲಿವೆ. ಇಲ್ಲಿಂದ ಮುಂದೆ ವೀರಶೈವ ಕೃತಿ ಮತ್ತು ಪ್ರತಿಗಳು ವಿಪುಲ ಸಂಖ್ಯೆಯಲ್ಲಿ ಬೆಳೆದು ಬಂದವು.

ವೈದಿಕ ಪರಿಭಾಷೆಯಲ್ಲಿ ರೂಪಗೊಂಡ ಹಸ್ತಪ್ರತಿಗಳ ಚರಿತ್ರೆ ಆರಂಭವಾಗುವದು ಹರಿದಾಸ ಪರಂಪರೆಯ ಆಂದೋಲನದಿಂದ. ಆದರೆ ವಾಸ್ತವವಾಗಿ ವೈದಿಕ ಪರಂಪರೆ ಕ್ರಿ.ಶ. ೧೨-೧೩ನೆಯ ಶತಮಾನಕ್ಕೆ ಹಿಂದೆ

## ಅಧ್ಯಾಯ ಎರಡು

## ಹಸ್ತ ಪ್ರತಿಗಳ ತಾತ್ವಿಕ ವಿಶ್ಲೇಷಣೆ

### ೧: ರೂಪ ಸ್ವರೂಪ

ಈ ಅಧ್ಯಾಯದಲ್ಲಿ ಕನ್ನಡ ಹಸ್ತಪ್ರತಿಗಳ ಸಾಹಿತ್ಯಿಕ ಸ್ವರೂಪವನ್ನು ಕುರಿತು ಚರ್ಚಿಸುವ ಪ್ರಯತ್ನ ಮಾಡಲಾಗಿದೆ. ಈ ಪ್ರಯತ್ನ ಹಸ್ತಪ್ರತಿ ರೂಪಗಳ ಜೊತೆಗೆಯೇ ಕನ್ನಡ ಸಾಹಿತ್ಯದ ರೂಪಗಳು ಬೆಳೆದುಬಂದ ಕ್ರಮವನ್ನು ಚರ್ಚಿಸುವುದಾಗಿದೆ.

ನಮ್ಮ ಪರಂಪರೆಯಲ್ಲಿ ಪುಸ್ತಕ ಎಂದೂ ಕೇಂದ್ರವಾಗಿದ್ದಿಲ್ಲ." ಎಲ್ಲೆಲ್ಲಿ ಕ್ರೈಸ್ತ ಧರ್ಮ ಬಂತೊ ಅಲ್ಲೆಲ್ಲಾ ಸಾಂಸ್ಕೃತಿಕ ಪ್ರಭುತ್ವ ಬಂತು". (ಕೀರ್ತಿನಾಥ ಕುರ್ತುಕೋಟಿ: ೧೯೯೬;೫೨) ಇದಕ್ಕಿಂತ ಮೊದಲು ಪುಸ್ತಕಕ್ಕಿಂತ ಬಿಡಿಬಿಡಿಯಾದ ಕೈಬರಹದ ರೂಪಗಳಲ್ಲಿ ಮತ್ತು ಮನುಷ್ಯನ ಮಾತುಗಳಲ್ಲಿಯೇ ಹೆಚ್ಚಾಗಿ ನಂಬಿಕೆ ಇಡಲಾಗಿತ್ತು. ಮನುಷ್ಯನ ಬಾಯಿ ಮಾಲಿನೆ ಮೂಲಕ ಕೈಬರಹಕ್ಕಿಳಿಯುವ ಸಂದರ್ಭಗಳಲ್ಲಿಯೇ ಹಸ್ತ ಪ್ರತಿಗಳ ಮೌಲ್ಯವನ್ನುಗುರುತಿಸಬಹುದು. The History of Book In India ಎಂಬ ಕೃತಿಯೊಂದು ಬರಹ ರೂಪತಾಳಿರುವ ಬಗ್ಗೆ ವಿವರಣೆ ನೀಡುತ್ತದೆ. ನಮ್ಮಲ್ಲಿ ಬರವಣಿಗೆಯನ್ನು ಸಾಹಿತ್ಯದಲ್ಲಿ ಶಾಸ್ತ್ರದಲ್ಲಿ ಜಾರಿಗೆ ತಂದವರು ಜೈನರು ಮತ್ತು ಬೌದ್ಧರು. ಬ್ರಾಹ್ಮಣರು ವಿದ್ವಾಂಸರಾದರೂ ಬರವಣಿಗೆಯನ್ನು ತರಲಿಲ್ಲ. ಬೌದ್ಧ ಮತ್ತು ಜೈನರ ನಂತರ ಮೊಗಲರಕಾಲದಲ್ಲಿ ಉತ್ತರ ಭಾರತದಲ್ಲಿ ಬರವಣಿಗೆಯನ್ನು ತಂದವರು `ಕಾಯಸ್ತರು'. ಇವರು ಇವತ್ತಿಗೂ ನವರಾತ್ರಿಯಲ್ಲಿ ಲೇಖನಿಮತ್ತು ಮಸಿ ಕುಡಿಕೆಯನ್ನಷ್ಟೆ ಪೂಜೆ ಮಾಡುತ್ತಾರೆ. ಇಂಥ ಸಾಂಸ್ಕೃತಿಕ ಆಚರಣೆಗಳು ನಮ್ಮ ಬರಹ ಮತ್ತು ಹಸ್ತಪ್ರತಿ ನಿರ್ಮಾಣ ಪರಂಪರೆಯನ್ನು ತಿಳಿಸಿಕೊಡುವ ಆಕರಗಳಾಗುತ್ತವೆ. ಕನ್ನಡ ಹಸ್ತ ಪ್ರತಿಗಳಲ್ಲಿಯೇ ಈ ಬಗೆಯ ಆಚರಣೆಯ ಹಸ್ತ ಪ್ರತಿಗಳು ದೊರೆಯುತ್ತವೆ. ಉದಾ: ಶರಣರ ಆಚರಣೆಯ ರೀತಿ ನೀತಿಗಳ ವಿವರವನ್ನು ತಿಳಿಸುವ ಬನ್ನಂಜೆ ದೇವರು ರಚಿಸಿದ 'ಆಚರಣೆಯ ವಚನ' ಹಸ್ತ ಪ್ರತಿ ಮುಖ್ಯವಾದದ್ದು. ಈ ಅಧ್ಯಾಯ ಹಸ್ತಪ್ರತಿ ರೂಪಗಳನ್ನು ಕಂಡುಕೊಳ್ಳುವ ಪ್ರಯತ್ನದತ್ತ ಸಾಗುವುದರಿಂದ ಕನ್ನಡ ಹಸ್ತಪ್ರತಿ ಪರಂಪರೆಯಲ್ಲಿ ಸಾಗಿಬಂದಿರುವ ಬೇರೆ ಬೇರೆ ರೂಪಗಳ ಚಾರಿತ್ರಿಕ ವಿಕಾಸ ಕ್ರಮವನ್ನು ಗಮನಿಸಿದಾಗ ರೂಪಗಳ ನಡುವಿನ ಪರಸ್ಪರ ಸಂಘರ್ಷ ಸ್ಪಷ್ಟವಾಗಿ ಎದ್ದು ಕಾಣುತ್ತದೆ.

ಕನ್ನಡ ಸಾಹಿತ್ಯ ಸಂದರ್ಭದಲ್ಲಿ `ಏನು ಹೇಳಬೇಕು' ಎನ್ನುವ ವಿಷಯದಲ್ಲಿ ವಸ್ತುವೂ, ಹೇಗೆ ಹೇಳ ಬೇಕು ಎನ್ನುವ ಶೈಲಿ ರೂಪಗಳ ಸಂಕ್ರಮಣ ಸ್ಥಿತಿಯಲ್ಲಿ ಹೊಸ ಹೊಸ ಪ್ರಯೋಗಗಳು ರೂಪಗೊಂಡ ಕಾರಣವಾಗಿ ಕನ್ನಡ ಹಸ್ತಪ್ರತಿಗಳಲ್ಲಿ ವಸ್ತು ಮತ್ತು ರೂಪ ವೈವಿಧ್ಯಗಳು ವಿಶೇಷವಾಗಿ ಬಳಕೆಯಾಗುತ್ತ

ಬಂದಿವೆ. ಹೀಗಾಗಿ "ನವೋದಯ ಪೂರ್ವದ ಒಂದೂವರೆ ಸಾವಿರ ವರ್ಷಗಳ ಕನ್ನಡ ಸಾಹಿತ್ಯದ ಸೃಷ್ಟಿಕಾರ್ಯದಲ್ಲಿ ಪ್ರತಿಭಟನೆಗಿಂತ ಪ್ರತಿಕ್ರಿಯೆ, ಪ್ರತಿಕ್ರಿಯೆಗಿಂತ ಪ್ರಯೋಗ ರೂಪದ ಪ್ರಯತ್ನಗಳೇ ಹೆಚ್ಚು ಕಾಣುತ್ತವೆ. (ಎಂ.ಎಂ.ಕಲಬುರ್ಗಿ ೧೯೯೦;೧೪) ಇದರಿಂದ ಕನ್ನಡದ ಎಲ್ಲರೂಪಗಳು ಒಂದು ಮತ್ತೊಂದಕ್ಕೆ ಪ್ರತಿರೋಧವಾಗಿಯೋ ಇಲ್ಲವೆ ಒಂದು ಇನ್ನೊಂದರ ಪರ್ಯಾಯ ಕ್ರಮವಾಗಿಯೋ ಹುಟ್ಟಿಕೊಂಡಂಥವು. ಇಲ್ಲಿ ಯಾವೊಂದು ರೂಪ ತನ್ನೊಂದಿಗೆ ತನ್ನಕಾಲದ ಚರಿತ್ರೆಯನ್ನು ಕಟ್ಟಿಕೊಂಡೆ ಬಂದಿದೆಯಾದರೂ ಒಂದು ಕ್ರಮದ ಚರಿತ್ರೆಯನ್ನು ನಿರ್ಮಿಸುವಲ್ಲಿ ಯಾವತ್ತು ಸಾಧ್ಯವಾಗಲಿಲ್ಲ.ಅಂದರೆಕನ್ನಡದ ರೂಪಗಳು ತೀರಾ ಅಡ್ಡಾದಿಡ್ಡಿಯೆನ್ನಬಹುದಾದ ಕ್ರಮದಲ್ಲಿ ಚಲಿಸಿದ್ದರಿಂದ ಯಾವ ರೂಪವೂ ಒಂದು ಸಮಗ್ರ ಪರಂಪರೆಯನ್ನು ನಿರ್ಮಿಸಲಿಲ್ಲ. ಅಂದರೆ ಒಂದು ರಾಜಕೀಯ ಶಕ್ತಿ ಚಂಪುವಿನಂತಹ ರೂಪವನ್ನು ನಿಯಂತ್ರಿಸುವಾಗಲೆ ಇನ್ನೊಂದು ಸಾಹಿತ್ಯಿಕ ರೂಪ ಅದನ್ನು ಹಂಗಿಸುವ ಮಾದರಿಯಲ್ಲಿ ಹುಟ್ಟಿಕೊಂಡಿತು. ಇದನ್ನು ಸ್ಪಷ್ಟಗೊಳಿಸುವುದಾದರೆ ಚಂಪು ಯಾವುದನ್ನು ಧಾರ್ಮಿಕವೆಂದು ಪರಿಭಾವಿಸಿತ್ತೊ ಅದರ ಗದ್ದುಗೆಯನ್ನೇರಿ ವಿಜೃಂಭಿಸುತ್ತಿದ್ದ ಕೇವಲ ನೂರು ವರ್ಷಗಳಲ್ಲೆ ಜನಭಾಷೆಯ ವಚನ ರೂಪ ಹುಟ್ಟಿಕೊಂಡಿದ್ದು ಈ ಬಗೆಯ ಧೋರಣೆಯಿಂದ. ಕಲಬುರ್ಗಿಯವರು ಹೇಳುವಂತೆ ಪ್ರತಿಭಟನೆ, ಪ್ರತಿಕ್ರಿಯೆ ಮತ್ತು ಪ್ರಯೋಗ ಈ ಮೂರು ಮನಸ್ಸುಗಳು ಹಸ್ತ ಪ್ರತಿಯ ನಿರ್ಮಿತಿಯುದ್ದಕ್ಕೂ ಬಹಳ ಜಾಗರೂಕತೆಯಿಂದ ಕೆಲಸ ಮಾಡುತ್ತ ಬಂದಿವೆ (೧೯೯೦;೧೪).

ಕಾಲಕಾಲಕ್ಕೆ ನಡೆದ ಧಾರ್ಮಿಕ ಸಂಘರ್ಷ ಮತ್ತು ಸಾಮಾಜಿಕ ಸ್ಥಿತ್ಯಂತರಗಳು ಹಸ್ತಪ್ರತಿ ಸಾಹಿತ್ಯ ಹೊಸರೂಪ ಮತ್ತು ವಸ್ತು ಪಡೆಯಲು ಪ್ರಮುಖ ಕಾರಣಗಳಾದವು. ಈ ಮಾತಿಗೆ ಸಾಕ್ಷಿಯಾಗಿ ಚರಿತ್ರೆಯಲ್ಲಿ ಅನೇಕ ಅಸಂಘಟನಾತ್ಮಕ ಸಂಘರ್ಷಗಳು, ಚಳುವಳಿಗಳು ನಿರಂತರವಾಗಿ ಜರುಗುತ್ತಲೇ ಬಂದಿವೆ. ಸೌಹಾರ್ಧತೆಯನ್ನು ಕಾಯ್ದುಕೊಳ್ಳುವ ನೆಪದಲ್ಲಿ ಹುಟ್ಟಿಕೊಂಡ ಶಾಸನಗಳು, ರಾಜಕೀಯವಾಗಿ ಮುಂದುವರೆಯುತ್ತಾ ರಾಜ ವಂಶಾವಳಿಯ ಚರಿತ್ರೆಯನ್ನು ಮಾತ್ರ ಕಟ್ಟಿಕೊಡುವ ಆಕರಗಳಾಗುತ್ತವೆ. ಶಾಸನಗಳ ಸಾಂಸ್ಕೃತಿಕ ದೃಷ್ಟಿಕೋನವಿರುವದೂ ಕೂಡಾ ಮುಖ್ಯವಾಗಿ ಧಾರ್ಮಿಕ ಮತ್ತು ರಾಜಕೀಯ ನೆಲೆಯಲ್ಲಿ. ಹೀಗಾಗಿ ಕ್ರಿಶ ೧೧ನೆಯ ಶತಮಾನದ ಶ್ರವಣಬೆಳ್ಗೊಳದ ಬುಕ್ಕರಾಯನ ಶಾಸನ ಜೈನರಿಗೂ, ವೈಷ್ಣವರಿಗೂ ನಡೆದ ಸಂಘರ್ಷವನ್ನು ಹತ್ತಿಕ್ಕಿ ಪರಸ್ಪರ ಸೌಹಾರ್ದನೆಲೆಯಲ್ಲಿಬದುಕುವ ರೀತಿಯನ್ನು ತಿಳಿಸಿದ ಮಾತ್ರಕ್ಕೆ ಶಾಸನ ಮಹತ್ವವಾಗುವದಿಲ್ಲ. ಅದರೊಳಗೆಯೇ ಅಡಗಿಕೊಂಡಿರುವ ಚಳವಳಿಯ ಸಮಷ್ಟಿ ಸ್ವರೂಪವನ್ನು ಹತ್ತಿಕ್ಕಿದ್ದು ಮಹತ್ವದ ಅಂಶ. ಅಂದರೆ ಚಳುವಳಿಯಂತ ಪುರೊಗಾಮಿ ವ್ಯವಸ್ಥೆ ಹಾಗೂ ರಾಜಕೀಯವಾದ ಸೌಹಾರ್ದತೆ ಮತ್ತು ಸಾಮರಸ್ಯವಾದಿ ನಿಲುವುಗಳು ಪ್ರತಿಗಾಮಿಯಾಗಿ ಕಾರ್ಯ ನಿರ್ವಹಿಸುತ್ತಾ ರೂಪ ಸ್ವರೂಪಕ್ಕೆ ಬೇರೆಯಾದ ಚಾಲನೆಯನ್ನೆ ನೀಡಿದವು.ಇಂಥಲ್ಲಿಯೇ 'ಮುಲ್ಲಾ ಶಾಸ್ತ್ರ'ದಂತ ಹಸ್ತಪ್ರತಿಗಳು ಕೂಡಾ ಮಹತ್ವದ ದಾಖಲೆಗಳಾಗುತ್ತವೆ. ಸುಮಾರು ೧೮೦೦ರಲ್ಲಿ ಚಂದ್ರಸಾಗರವರ್ಣಿಯಿಂದ ಭಾಮಿನಿ ಷಟ್ಪದಿಯಲ್ಲಿ ನಿರ್ಮಾಣಗೊಂಡ ಈ ಹಸ್ತ ಪ್ರತಿಯಲ್ಲಿ ಇಂದ್ರನು ಗೌತಮನೆಂಬ ಬ್ರಾಹ್ಮಣನಿಗೆ ಗಣದರ ಪದವಿಯನ್ನು ಕೊಡಲು ಪಾರ್ಶ್ವಭಟ್ಟಾರಕನು ಕೋಪಗೊಂಡು ಮುಲ್ಲಾಶಾಸ್ತ್ರವನ್ನು ಪ್ರಚಾರಮಾಡಿದ ಕಥೆ ಉಲ್ಲೇಖಗೊಂಡಿದೆ.

ಚಳುವಳಿಗಳು ಪ್ರತಿಗಾಮಿತನವನ್ನು ವಿರೋಧಿಸುವ ಕಾರಣಕ್ಕಾಗಿಯೇ ಹುಟ್ಟಿಕೊಂಡರೆ ರಾಜಸತ್ತೆ ಆ ಚಳುವಳಿಯ ಸ್ವರೂಪವನ್ನು ಹತ್ತಿಕ್ಕುವ ಪ್ರಯತ್ನ ಮಾಡುತ್ತಲೆ ಇರುತ್ತದೆ. ಚಳುವಳಿಯ ಉದ್ದೇಶ ಹೊಸ ಸಾಮಾಜಿಕ ವ್ಯವಸ್ಥೆಯೊಂದನ್ನು ಸ್ಥಾಪಿಸುವುದಾದರೆ ರಾಜಶಕ್ತಿ ಯಾವಾಗಲೂ ಇದ್ದ ವ್ಯವಸ್ಥೆಗೆ ಬದ್ಧವಾಗಿ ತನ್ನ ಫ್ಯೂಡಲ್ ಗುಣವನ್ನು

ಕಾಯ್ದುಕೊಳ್ಳುವ ಹುನ್ನಾರದಲ್ಲಿರುತ್ತದೆ. ಇಂಥ ಧೋರಣೆಗಳೇ ಯಾವೊಂದು ಸಾಂಸ್ಕೃತಿಕ ಬದಲಾವಣೆಗೆ ನಾಂದಿಯಾಗುತ್ತವೆ. ಇದು ಹಸ್ತ ಪ್ರತಿಗಳಂತಹ ಸಾಹಿತ್ಯಿಕ ಸ್ವರೂಪಗಳ ಮೇಲೂ ವಿಶೇಷ ಪರಿಣಾಮನ್ನುಂಟು ಮಾಡುತ್ತದೆ. ಯಾಕೆಂದರೆ ಆ ಹೊತ್ತಿನ ಮನೋಧರ್ಮಗಳು ಸಾಮಾಜಿಕ ಮತ್ತು ಸಾಂಸ್ಕೃತಿಕವಾದಂತಹ ಆಯಾಕಾಲ ಸಾಹಿತ್ಯಿಕ ಮೌಲ್ಯಗಳಾಗುತ್ತವೆ, ಮಾನದಂಡಗಳಾಗುತ್ತವೆ. ಚಂಪೂ ಯುಗದಲ್ಲಿ ಪ್ರತಿಷ್ಠಿತ ರೂಪಗಳು ರಾಜರ ಯುದ್ಧವನ್ನು ಅವರ ಶೌರ್ಯ, ಸಾಹಸ ಹಾಗೂ ಧಾರ್ಮಿಕ ವಿತಂಡವಾದವನ್ನು ಹೆಚ್ಚೆಚ್ಚು ಸಿದ್ಧಾಂತಗೊಳಿಸುವುದರತ್ತ ತೊಡಗಿದ್ದರಿಂದ ಚಳುವಳಿಗೆ ಕಾರಣವಾದ ಅನೇಕರೂಪಗಳು ಫ್ಯೂಡಲ್ ವ್ಯವಸ್ಥೆಯೊಳಗೆ ಮುಚ್ಚಿಹೋದವು. ಗದ್ದವನ ವಿಜೃಂಭಣೆಯ ಬಗ್ಗೆ ಮಾತ್ರ ಗಮನಕೊಟ್ಟಾಗ ಸೋತವರು ಜೀವಂತವಾಗಿ ಉಳಿವ ಕ್ರಮಗಳ ಬಗ್ಗೆ ಗಮನ ಕಡಿಮೆಯಾಯಿತು. ಚಂಪುವಿನಂತ ಒಂದುರೂಪ ಆಶ್ರಯದಾತ ಕವಿ ಮತ್ತು ಕರಾರುವಕ್ಕಾದ ಓದುಗವರ್ಗವನ್ನು ನಿರ್ಮಿಸಿತು. ಹೀಗಾಗಿ ಒಂದೊಂದು ರಾಜಸತ್ತೆಯ ಕಾಲದಲ್ಲಿ ವಿಶೇಷವಾಗಿದ್ದ ರೂಪಗಳು ಆ ರಾಜಸತ್ತೆಯು ವಿನಾಶದ ನಂತರ ಬದಲಾಗಿ ಬೇರೆ ರೂಪಗಳು ಜಾರಿಗೆ ಬರುವುದಕ್ಕೆ ಓದುಗವರ್ಗವೂ ಕಾರಣವಾಯಿತು. ಇದರೊಂದಿಗೆ ಜನರಿಗೆ ಪ್ರಿಯವಾದ ಕಲೆಗಳು, ಅಭಿವ್ಯಕ್ತಿಗಳು ರೂಪಗಳು ಆಕಾರ ಪಡೆಯುತ್ತಿದ್ದವು. ಕಲೆಯನ್ನು ಆಸ್ವಾದಿಸುವ ದೃಷ್ಟಿ ನೇರ ಹಾಗೂ ವೈಯುಕ್ತಿಕವಾಗಿದ್ದರಿಂದ ಕನ್ನಡ ಲೋಕದಲ್ಲಿ ಎಲ್ಲ ಬಗೆಯ ರೂಪಕಾತ್ಮಕ ವಿಧಾನಗಳು ಹುಟ್ಟಿಕೊಳ್ಳುವುದಕ್ಕೆ ಸಾಧ್ಯವಾಯಿತು.

ಅಖಿಲ ಭಾರತ ರಾಷ್ಟ್ರೀಯ ಮಟ್ಟದಲ್ಲಿ ಔರಂಗಜೇಬನಂತಹ ಒಬ್ಬ ದೊರೆ ತನ್ನ ಕಲೆಯ ವಿರೋಧ ನೀತಿಯಿಂದಕೇವಲ ಹುಸಿ ಕಲ್ಪನೆಯ ದೊರೆಯಾಗಿ ಮಾತ್ರ ಉಳಿಯಲಿಲ್ಲ, ನಮ್ಮ ಚರಿತ್ರೆಯ ದುರಂತ ದಾಖಲೆಯೇ ಆಗಿದ್ದಾನೆ. ಹೇಗೆ ರಾಜ್ಯಶಕ್ತಿ ಸಮುದಾಯದ ಆಸಕ್ತಿ ಮತ್ತು ಜನತೆಯ ಬಗೆಗಿನ ತನ್ನ ಬಲವಾದ ವಸಾಹತು ಧೋರಣೆಯಿಂದ ಸಾಹಿತ್ಯರೂಪಕ್ಕೆ ಕಾರಣವಾಗುತ್ತದೆಂಬುದನ್ನು ಇಂಥ ಸಂದರ್ಭಗಳಲ್ಲಿ ಕಾಣಬಹುದು. ಆದರೆ ಇದೇ ಹೊತ್ತಿಗೆ ಬಹುಮನಿ ರಾಜ್ಯದ ಆದಿಲ್ ಶಾಹಿಯ 'ಕಿತಾಬೆ ನೌರಸ್' ನ್ನು ಕೂಡಾ ನೆನೆಯಬೇಕಾಗುತ್ತದೆ. "ಆಳುವ ವರ್ಗಕ್ಕೆ ಸೇರಿದ ಇಬ್ರಾಹಿಂನಂಥ ಒಬ್ಬ ವ್ಯಕ್ತಿ ರಚಿಸಿದ ಕಿತಾಬೆ ನೌರಸ್ ಸಾಂಸ್ಕೃತಿಕವಾಗಿ ಮಹತ್ವವಾಗುತ್ತದೆ". (ಡಾ.ರಹಮತ್ ತರೀಕೆರೆ:೧೯೯೨;೫೬)ಆಳುವ ವರ್ಗಕ್ಕೆ ಸೇರಿದ ಔರಂಗ ಜೇಬನಿಗೂ ಮತ್ತು ಅದೇ ವರ್ಗದ ಇಬ್ರಾಹಿಂನಂಥ ರಾಜಕೀಯ ವ್ಯವಸ್ಥೆಯೊಳಗೆ ಒಂದು ಕೃತಿ ತಿರಸ್ಕರಿಸುವ ಮತ್ತು ಹುಟ್ಟಿಕೊಳ್ಳುವ ಸಮಕಾಲೀನ ವಾಗ್ವಾದಗಳು ಹೊಸ ಪ್ರಕಾರ, ರೂಪಗಳಿಗೆ ಮುಖ್ಯಕಾರಣವಾಗುತ್ತವೆ.

ನಮ್ಮ ಕವಿಗಳು ಮಾಧ್ಯಮಕ್ಕಾಗಿ ರೂಪವನ್ನು ಅಭಿವ್ಯಕ್ತಿಗಾಗಿ ವಿಷಯವನ್ನು ಆಯ್ದುಕೊಂಡು ಸಾಹಿತ್ಯರಚನೆ ಮಾಡಿದರು. ಈ ಅಭಿವ್ಯಕ್ತಿ ಮತ್ತು ಮಾಧ್ಯಮಗಳಿಂದಾದ ಸಂಧಾನ, ಸಾಂಸ್ಕೃತಿಕವಾಗಿ ಅಲಕ್ಷಿತವಾಗಿದ್ದ ನೂರಾರು ರೂಪಗಳಿಗೆ ವೇದಿಕೆಯನ್ನು ನಿರ್ಮಿಸಿಕೊಟ್ಟಿತ್ತು. ಆದರೆ ಹೀಗೆ ಅಲಕ್ಷಿತ ರೂಪಗಳೆಂದು ಕರೆಯುವ ವಿಧಾನವೇ ಸಾಂಸ್ಕೃತಿಕವಾಗಿ ಬಹಳ ಅಪಾಯಕಾರಿಯಾದದ್ದು. ಚಂಪು, ವಚನ, ರಗಳೆ ಮುಂತಾದ ಸ್ಥಾಪಿತ ರೂಪಗಳಗಿಂತ ಭಿನ್ನವಾದ ಒವನಿಗೆ, ಒನಕೆವಾಡು, ಚಿತ್ತಾಣ, ಪದಂಪದೆಯಂತ ಅಲಕ್ಷಿತ ರೂಪಗಳತ್ತ ನಮ್ಮ ಗಮನ ಹರಿಯಲಿಲ್ಲ. ಮುಖ್ಯವಾಗಿ ಇಂಥ ರೂಪಗಳು ಜನಪ್ರಿಯ ಮಾದರಿ ನೆಲೆಯಲ್ಲಿ ಹುಟ್ಟಿಕೊಳ್ಳದೆ ಸಮುದಾಯದ ಸುಪ್ತಸಂವೇದನ ಪ್ರೇಜ್ಞೆಯಿಂದ ರೂಪಗೊಂಡವು. ಆ ಹೊತ್ತಿನಲ್ಲಿ ರಾಜಶ್ರಯ ಮತ್ತು ವರ್ಗ ಪ್ರಭುತ್ವಗಳು ಶಕ್ತಿಶಾಲಿ ವ್ಯವಸ್ಥೆಗಳಾಗಿದ್ದರಿಂದ ಇಂಥ ಅನೇಕ ಬಗೆಯ ಸಾಮುದಾಯಿಕ ಸ್ವರೂಪಗಳನ್ನು ತಿಳಿಯುವಲ್ಲಿ ಅವು ಅಡ್ಡಿಯನ್ನುಂಟು ಮಾಡಿದವು. ಇದರಿಂದಾಗಿ ಕಡೆಗಣಿತ ರೂಪಗಳು ನಮ್ಮ ಅಧ್ಯಯನದ ಭಾಗಗಳಾಗಲೇ ಇಲ್ಲ.ಇಂಥ ಅಧ್ಯಯನ ಇಂದು ಅಗತ್ಯವಾಗಿ ನಡೆಯಬೇಕಾಗಿದೆ.

ಚಂಪುವಿಗಿಂತ ತೀರ ಮೊದಲಿನ ರೂಪಗಳು ಇಂಥ ಕಡೆಗಣಿತ ಜಾನಪದ ಮತ್ತು ಸಮುದಾಯದ ಅಭಿವ್ಯಕ್ತಿಗಳಾಗಿದ್ದವು. ತೀರ ಪ್ರಾಚೀನ ಹಸ್ತಪ್ರತಿಗಳಲ್ಲಿ ಕಾಣಿಸಿಕೊಂಡ ರೂಪಗಳೆಂದರೆ ಓವನಿಗೆ, ಒನಕೆವಾಡು, ಚಿತ್ತಾಣ, ಬೆದಂಡೆ ಮುಂತಾದವು.(ಈ ರೂಪದ ಹಸ್ತಪ್ರತಿಗಳು ಈವರೆಗೂ ಲಭ್ಯವಾಗಿಲ್ಲ.) ಓವನಿಗೆ ಮತ್ತು ಒನಕೆವಾಡುಗಳಿಗೆ ಬೀಸುವ ಮತ್ತು ಕುಟ್ಟುವ ಹಾಡುಗಳೆಂದು ಅರ್ಥವಿದೆಯಾದ್ದರಿಂದ ಬಹುಶಃ ಇವು ಜನಪದ ಸಾಹಿತ್ಯ ರೂಪಗಳಿರಬೇಕೆಂಬುದು ಬಹುವಿದ್ವಾಂಸರ ನಿರ್ಧಾರ. ಶಿವಮಾರನ ಗಜಾಷ್ಟಕವು ಓವನಿಗೆ ಒನಕೆವಾಡು ರೂಪತಾಳಿ ಆ ಕಾಲದಲ್ಲಿ ಜನಪ್ರಿಯವಾಗಿರಬೇಕು. ಆದರೆ ಗಜಾಷ್ಟಕವು ಮೂಲತಃ ಯಾವ ರೂಪದಲ್ಲಿತ್ತೆಂದು ಖಚಿತವಾಗಿ ತಿಳಿದಿಲ್ಲ. ಅನಂತರ ಕನ್ನಡಕ್ಕೆ ವಿಶಿಷ್ಟವಾದ ರೂಪಗಳ ಸಂದರ್ಭದಲ್ಲಿ ಮುಖ್ಯವಾಗಿ ಚಿತ್ತಾಣ ಮತ್ತು ಬೆದಂಡೆ ಈ ರೂಪಗಳು ಕವಿರಾಜಮಾರ್ಗಕ್ಕೆ ಹಿಂದಿನ ಕಾಲದಿಂದಲೇ ಕನ್ನಡದಲ್ಲಿ ಬಳಕೆಯಾಗಿರಬೇಕು. ಅವುಗಳಲ್ಲಿಕೆಲವು ಮಾರ್ಪಾಡುಗಳನ್ನು ಮಾಡಿ ಹಳೆಯ ಕವಿಗಳು ತಮ್ಮ ಕಾಲದ ಹೊಸ ಕಾವ್ಯಕ್ಕೆ ಹೊಂದಿಸಿಕೊಂಡರೆಂದೂ ಹೇಳಲಾಗಿದೆ. ಈ ಸಾಹಿತ್ಯ ರೂಪಗಳಲ್ಲಿ ಬರೆದ ಕಾವ್ಯಗಳು ಕವಿರಾಜಮಾರ್ಗ ಕಾಲದಲ್ಲಿ ಅಥವಾ ಹಿಂದೆಯೇ ರಚಿತವಾಗಿರಬೇಕು. ರಟ್ಟಕವಿಯ(೧೩೦೦) ರಟ್ಟಮತವೆಂಬ ಶಾಸ್ತ್ರ  ಕೃತಿಯ ಅಸಮಗ್ರ ಹಸ್ತಪ್ರತಿ ವೃತ್ತ, ಕಂದ, ರಗಳೆ, ಅಕ್ಕರ, ತ್ರಿಪದಿ ಎಲ್ಲಾ ಸೇರಿ ಸುಮಾರು ೯೦೦ ಪದ್ಯಗಳಲ್ಲಿದೆ. (ಆರ್.ನರಸಿಂಹಚಾರ್ ೧೯೭೨:೪೬೨) ಇದರಿಂದ ರಟ್ಟಮತವು ಚಿತ್ತಾಣದ ಲಕ್ಷಣಕ್ಕೆ ಹೆಚ್ಚು ಹತ್ತಿರವಾದ ಕೃತಿ ಎಂದು ವಿದ್ವಾಂಸರು ತರ್ಕಿಸುತ್ತಾರೆ.

ಮುಂದೆ ಎರಡನೆಯ ನಾಗವರ್ಮನು ತನ್ನ ಕಾವ್ಯಾವಲೋಕನದಲ್ಲಿ ಇಡುಕಂಗಬ್ಬ, ಕುಳಕ, ಕೋಶ, ಮೇಲ್ವಾಡು, ಹಾಡುಗಬ್ಬ, ಬೆದಂಡೆಗಬ್ಬ, ಬಾಜನಗಬ್ಬ ಎಂಬ ರೂಪಗಳನ್ನು ಅಚ್ಚಗನ್ನಡದಲ್ಲಿ ಹೆಸರಿಸುವುದರಿಂದ ಇಂಥ ಬರವಣಿಗೆ ಕನ್ನಡದಲ್ಲಿ ಹಿಂದಿನಿಂದಲೇ ಇರಬಹುದೆಂದು ಊಹಿಸಲು ಅವಕಾಶವಿದೆ. ಆದರೆ ಪ್ರಶ್ನೆ ಇರುವುದು ಇವುಗಳ ವಿಕಾಸಕ್ರಮದ ಇತಿಹಾಸದಲ್ಲಲ್ಲ. ಇಂಥ ರೂಪಗಳು ಅತ್ಯಂತ ಕೆಳವರ್ಗದ ಅಥವಾ ಕೆಳಸಮುದಾಯದ ರೂಪಗಳೆಂಬ ವಿಶ್ಲೇಷಣೆಯಲ್ಲಿ. ಇಡೀ ಸಮುದಾಯದೊಳಗೆ ಜೀವಂತವಾಗಿದ್ದ ಇಂಥ ರೂಪಗಳೆಲ್ಲ ಯಾಕೆ ಮರೆಯಾದವು? ಹಸ್ತಪ್ರತಿ ಸಂದರ್ಭದಲ್ಲಿ ಬಹುದೊಡ್ಡ ಪರಂಪರೆಯನ್ನು ನಿರ್ಮಿಸಬಹುದಾದಷ್ಟು ಶಕ್ತಿಶಾಲಿಯಾಗಿರುವ ಈ ರೂಪಗಳು ಯಾವ ಕಾರಣಕ್ಕಾಗಿ ಅವಜ್ಞೆಗೆ ಗುರಿಯಾದವು? ಯಾಕೆ ಮತ್ತು ಯಾವ ಬಗೆಯ ಆಪತ್ತು, ಆಕ್ರಮಣಗಳು, ರೂಪಗಳಿಗೆ ಒದಗಿ ಬಂದವು? ಎಂಬಂತಹ ಪ್ರಶ್ನೆಗಳು ಒಂದು ಕಾಲದ ಜಟಿಲತೆಯನ್ನು ಬಿಡಿಸುವ ಸಂಗತಿಗಳಾಗುತ್ತವೆ. ಹಳೆಯ ಕವಿಗಳು ಕೆಲ ಮಾರ್ಪಾಡುಗಳನ್ನು ಮಾಡಿ ತಮ್ಮ ಕಾಲದಹೊಸ ಕಾವ್ಯಕ್ಕೆ ಹೊಂದಿಸಿಕೊಂಡದ್ದನ್ನು ನೋಡಿದರೆ ಅವರು ಈ ಕೆಳದರ್ಜೆಯ ರೂಪಗಳನ್ನು ದೂರೀಕರಿಸುತ್ತಾ ಮತ್ತು ಅವುಗಳಿಂದಲೇ ತಮ್ಮ ಕಾವ್ಯ ಸಾಮಗ್ರಿಯನ್ನು ಕಟ್ಟಿಕೊಳ್ಳುತ್ತಾರೆ. ಕವಿರಾಜಮಾರ್ಗ ಕಾಲದ ಹೊತ್ತಿಗೆ ರಾಜಕೀಯವಾಗಿ ರಾಷ್ಟ್ರಕೂಟರ ಅಮೋಘವರ್ಷ ನೃಪತುಂಗನ ಫ್ಯೂಡಲ್ ವ್ಯವಸ್ಥೆಯೊಂದು ಈ ಬಗೆಯ ರೂಪಕ್ರಾಂತಿಯ ಒಳಗೆ ಮತ್ತು ಹೊರಗೆ ಬೇರೆ ಬೇರೆಯ ಅವಸ್ಥಾಂತರಗಳನ್ನು ಪಡೆದುಕೊಳ್ಳುತ್ತಿತ್ತು. ಮತ್ತು ಚಂಪುವಿನಂತ ಪ್ರತಿಷ್ಠಿತ ರೂಪಗಳು ನಿಧಾನವಾಗಿ ಬೆಳೆಯುತ್ತಿರುವ ಕಾಲವಾಗಿತ್ತು. ಈ ತರದ ಮೇಲ್ವರ್ಗದ ಸಂಸ್ಕೃತಿ ಕೆಳವರ್ಗದ ಅಭಿವ್ಯಕ್ತಿಯನ್ನು ಹತ್ತಿಕ್ಕುವ ಘಟನೆಗಳು ಪ್ರಧಾನವಾಗಿ ಎಲ್ಲ ರೂಪಗಳಲ್ಲಿ ಕಾಣಿಸಿಕೊಂಡಿದ್ದರಿಂದ ಹಿಂದೆ ಸರಿಯಲ್ಪಟ್ಟವು.ಚಿತ್ತಾಣ ಬೆದಂಡೆಯಂತ ಅನೇಕ ರೂಪಗಳು ನಿಜವಾಗಿ ಜಾನಪದ ರೂಪಗಳಾಗಿದ್ದರೆ, ಈ ಅಪಾಯ ಮತ್ತಷ್ಟು ತೀವ್ರವಾಗಿ ತಲೆದೋರಿರಬೇಕು. ಯಾಕೆಂದರೆ ಮೊದಲಿನಿಂದಲೂ ಸಾಹಿತ್ಯ ಪರಂಪರೆಯಲ್ಲಿ ಜಾನಪದ ಅಭಿವ್ಯಕ್ತಿಯನ್ನು ಕಡೆಗಣಿಸುತ್ತಲೇ ಬಂದಿದೆ. ಇದಕ್ಕೆ ಕವಿರಾಜಮಾರ್ಗದಲ್ಲಿ ಖಚಿತ ದಾಖಲೆಗಳು ದೊರೆಯುತ್ತವೆ.

ಕ್ರಿ.ಶ.೯-೧೦ನೆಯ ಶತಮಾನದ ಹೊತ್ತಿಗೆ 'ಚಂಪೂ' ಎಂಬ ಪ್ರತಿಷ್ಟಿತ ರೂಪ ಹಿಂದಿನ ಎಲ್ಲಾ ರೂಪಗಳನ್ನು ಸದೆಬಡಿದು ದಿಗ್ವಿಜಯ ಸಾಧಿಸಿದಂತೆ ರೂಪಗೊಂಡಿತು. "ಒಬ್ಬ ಕವಿ ಎಂಥ ಕಾವ್ಯವನ್ನು ಬರೆದಿದ್ದನೆಂಬುದರ

ಆಧಾರದಿಂದ ಆ ರಾಜನ ಕೀರ್ತಿ ಹೆಚ್ಚುತ್ತಿತ್ತು. ಅಂದರೆ ಒಂದು ಕಡೆ ಧರ್ಮ ಮತ್ತೊಂದು ಕಡೆ ಕಾವ್ಯ ಎರಡೂ ಒಬ್ಬ ರಾಜನ ಕೀರ್ತಿಗೆ ಶಿಖರಗಳಾಗಿದ್ದವು. ಇದರಿಂದ ಅನಿವಾರ್ಯವಾಗಿ ಒಬ್ಬಕವಿ ತನ್ನ ರಾಜ ಮತ್ತು ಧರ್ಮಗಳನ್ನು ತನಗೆ ಇಷ್ಟವಿಲ್ಲದಿದ್ದರೂ ಹೊಗಳಬೇಕಾದ ಸಂದಿಗ್ಧವಿತ್ತು" (ಆರ್ .ರಾಜಪ್ಪದಳವಾಯಿ:೧೯೬೩:೫೫). ಹೀಗಾಗಿ ಈ ಪರಂಪರೆಗೆ ಸ್ಥಾಪಿತವಾದ ಮೊದಲ ರೂಪವೆಂದರೆ ಚಂಪೂ.

೧೦ನೆಯ ಶತಮಾನದ ಕವಿಯೊಬ್ಬ ತನ್ನಕಾಲದ ಚಾರಿತ್ರಿಕ ನೆಲೆಗಳನ್ನೂ ಅದರ ಸ್ಥಿತಿಗತಿಗಳನ್ನು ಬಯಲುಗೊಳಿಸಲು ಹೂಡುವ ತಂತ್ರಗಳು ಮುಂದೆ ಇನ್ನು ಅನೇಕ ರೂಪವೈವಿಧ್ಯವನ್ನು ಪಡೆದುಕೊಳ್ಳುವುದಕ್ಕೆ ನೆರವಾದವು. "ಚಂಪೂ ಮಾಧ್ಯಮದ ಮೂಲಕ ತನ್ನನ್ನೂ ಅಭಿವ್ಯಕ್ತಿಸಿಕೊಂಡ ಪಂಪನನ್ನು ಮುಂದಿನ ಕವಿಗಳು ಅನುಸರಿಸುವ ಪ್ರಯತ್ನವನ್ನು ೧೯ನೆಯ ಶತಮಾನದ ಕೊನೆಯವರೆವಿಗೂ ಪಂಪನಮಾದರಿಯನ್ನು ಆತ್ಯಂತಿಕ ಮಾದರಿಯೆಂದು ಭಾವಿಸಿದ ಅನೇಕ ಕವಿಗಳು ಚಂಪೂವನ್ನು ರಚಿಸಿ ವಿಫಲರಾಗಿದ್ದಾರೆ. ಪ್ರಾಚೀನ ಮಾದರಿಯ ಅನುಕರಣೆ ಸಾಂಸ್ಕೃತಿಕ ಸಂದರ್ಭದ ಹೊಸ ಅವಸ್ಥಾಂತರಗಳನ್ನು ಪ್ರತಿನಿಧಿಸಲು ಸಾಧ್ಯವಿಲ್ಲವೆಂಬುದೆ ಇದರಿಂದ ತಿಳಿದುಬರುವ ಅಂಶವಾಗಿದೆ. ಆದರೆ ಹರಿಹರನ ರಗಳೆಗಳು, ರಾಘವಾಂಕ, ಕುಮಾರವ್ಯಾಸರ ಕಾವ್ಯಗಳು ಮೆಲ್ಲಿಂದ ಮೇಲೆಚಂಪೂವಿನಂತಹ ಆತ್ಯಂತಿಕ ಮಾದರಿ ರಚನೆಗಳ ವಿರುದ್ಧ ನಿಂತು ಅಂದಂದಿನ ಮಾನವಿಕ ವಿಕಾಸದ ಹೊಸ ನೆಲೆಗಳ ಶೋಧದಲ್ಲಿ ತೊಡಗಿದವು. ಎಂದರೆ ಪಂಪನ ಕಾಲದ ಅನಂತರದಲ್ಲಿ ಬಂದ ಚಂಪೂ ಕವಿಗಳು ತಮ್ಮ ಹಿಂದೆ ಇದ್ದ ಮಾದರಿಯನ್ನು ಮತ್ತೆ ಬಳಸಲು ಪ್ರಯತ್ನಾ ಮಾಡಿದ್ದಾರೆ." (ಶಿ.ರಂ.ನಾಗಾರಾಜ,೧೯೮೦;೬೯). ಹೀಗಾಗಿ ಅನಂತನಾಥನ ಬಗ್ಗೆ ಬರೆದ ಹಸ್ತಪ್ರತಿ ಪರಂಪರೆಯಲ್ಲಿ ಚಂಪೂ ಬೇರೆ ರೂಪಗಳಿಗಿಂತ ಶ್ರೇಷ್ಠವಾಯಿತು. ಸುಮಾರು ೧೫೮೧ರಲ್ಲಿ ಚಿಕ್ಕಪದ್ದಣ್ಣಶೆಟ್ಟಿ ಕವಿ ಸಾಂಗತ್ಯ ರೂಪದಲ್ಲಿ ಬರೆದ ಅನಂತನಾಥ ಚರಿತ್ರೆ ಹಸ್ತಪ್ರತಿ ಮುಖ್ಯವಾಗಲೆ ಇಲ್ಲ. ಆದರೆ ಅದೇ ಜನ್ನನ ಚಂಪೂರೂಪದ ಅನಂತನಾಥ ಪುರಾಣ ಹೆಚ್ಚು ಜನಪ್ರಿಯವೂ ಮೌಲಿಕವೂ ಆಯಿತು. ಆಶ್ಚರ್ಯದ ಸಂಗತಿ ಎಂದರೆ ಕ್ರಿ.ಶ. ೧೩೬೦ ರ ಹೊತ್ತಿಗೆ ನಿರ್ಮಾಣವಾದ ಚಂಪೂ ರೂಪದ ಮಂಗರಾಜನ ಖಗೇಂದ್ರಮಣಿ ದರ್ಪಣ' ದಂತಹ ಹಸ್ತಪ್ರತಿಗಳು ಮುಂದೆ ಸೃಷ್ಟಿಯಾಗಲಿಲ್ಲ.

ಧರ್ಮತತ್ವ, ನೀತಿಯನ್ನು ಬೋಧಿಸುವ ಹಾಗೂ ಭಕ್ತಿಯ ಅನುಸಂಧಾನ ಮಾಡುವ ಸಾಹಿತ್ಯರೂಪಗಳು ಹುಟ್ಟಿಕೊಂಡಿದ್ದು, ಮುಖ್ಯವಾಗಿ ಧರ್ಮ ಚಿಂತನೆಯ ಅಭಿವ್ಯಕ್ತಿಗಾಗಿ. ಹೀಗಾಗಿ ಧಾರ್ಮಿಕ ಮತೀಯವಾದಿಗಳು ಚಂಪೂವಿನಂತಹ ರೂಪವನ್ನು ತಮ್ಮ ಹಿತಾಸಕ್ತಿಗೆ ಬಳಸಿಕೊಳ್ಳುವುದರ ಮೂಲಕ ಬಂಧಿಸಿದರೆ ಅದರ ಹಿಂದೆನಡೆದ ಚಳುವಳಿಗಳು ಚಂಪುವಿಗೆ ಪ್ರತಿರೋಧವಾಗಿ ಬೇರೆ ರೂಪಗಳತ್ತ ತಮ್ಮ ಮನಸ್ಸನ್ನು ಹೊರಳಿಸಿದವು. ಅಂದರೆ ಹೊಸ ರೂಪದ ಹುಟ್ಟಿಗೆ ಸಂದರ್ಭದ ಧಾರ್ಮಿಕ ಮತ್ತು ರಾಜಕೀಯಶಕ್ತಿಗಳು ಕಾರಣವಾದಂತೆ, ಒಂದು ಹೊಸ ವಿಷಯದ ಪ್ರಯೋಗದಲ್ಲೂ ಇದೇ ಅಂಶಗಳು ಮುಖ್ಯವಾಗುತ್ತವೆ. ಆದರೆ ಒಂದು ರೂಪ ತನ್ನ ಪರಂಪರಯನ್ನು ನೇರವಾಗಿ ನಿರಾಕರಿಸಿದಾಗಲೂ ಅಪರೋಕ್ಷವಾಗಿ ಅದರಿಂದ ಪ್ರೇರಣೆ ಪ್ರಭಾವವನ್ನು ಪಡೆದುಕೊಂಡಿರುತ್ತದೆ. ಜೈನ ಪರಂಪರೆಯನ್ನು ನಿರಾಕರಿಸುವುದರ ಮೂಲಕ ವೀರಶೈವ ಪ್ರೇರಿತಗೊಂಡರೆ, ವೀರಶೈವ ಪರಂಪರೆಯನ್ನು ನಿರಾಕರಿಸುವ ಮೂಲಕ ವೈದಿಕ ಪರಂಪರೆ ಪ್ರೇರಣೆಗೊಂಡಿತು. ಮೇಲಿನ ಮೂರು ಸಂದರ್ಭದಲ್ಲಿ ನಡೆದಿದ್ದು ಈ ಬಗೆಯ ಪ್ರಯೋಗವೆ.

ಕನ್ನಡ ಕವಿಗಳು ಯಾವ ಕಾರಣಕ್ಕಾಗಿ ತಮ್ಮ ಕೃತಿಗಳಲ್ಲಿ ಹೊಸ ಬಗೆಯ ರೂಪಗಳನ್ನು ಪ್ರಯೋಗಿಸಿದರೊ ಅದೇ ಕಾರಣಕ್ಕಾಗಿ ವಿಷಯವನ್ನು ನಿರೂಪಿಸಿದರು. ಉದಾ: ಪಂಪ, ಪೊನ್ನ, ರನ್ನರಂತಹ ಕವಿಗಳು ಚಂಪೂ ರೂಪವನ್ನು ರಾಜಸತ್ತೆಯ ನೆಲೆಯಿಂದಾಗಿ ರೂಢಗೊಳಿಸಿದರೆ, ವಿಷಯವನ್ನು ಕೂಡ ರಾಜಸತ್ತೆಯ ಹಿನ್ನೆಲೆಯಲ್ಲಿ ನಿರೂಪಿಸಬೇಕಾದ

ಅನಿವಾರ್ಯತೆ ಇತ್ತು. ಧರ್ಮ ಅದೇ ಹೊತ್ತಿಗೆ ಸಾರ್ವತ್ರಿಕ ಮತ್ತು ಪಂಡಿತಮಾನ್ಯ ಮೌಲ್ಯವಾಗಿದ್ದರಿಂದ ಧಾರ್ಮಿಕವಾದ ಶ್ರೇಷ್ಠದರ್ಜೆಯ ಕೃತಿಗಳನ್ನು ರಚಿಸಿದರು. ಚಂಪೂ ರೂಪ ಪಂಪನ ಕಾಲಕ್ಕೆ ಧಾರ್ಮಿಕ ಮತ್ತು ಲೌಕಿಕವೆಂದು ಎರಡು ಬಗೆಯ ಕವಲುಗಳಾಗಿದ್ದು, ಅಷ್ಟೇನೂ ಮಹತ್ವದ ಸಂಗತಿಯಲ್ಲ. ಯಾಕೆಂದರೆ ಈಗಾಗಲೇ ಸಾಹಿತ್ಯ ವ್ಯಾಖ್ಯಾನಕಾರರು ಒಪ್ಪಿಕೊಂಡಂತೆ ಚಂಪುವಿನ ಮೊದಲ ರೂಪ ೧ನೆಯ ಗುಣವರ್ಮನ ಹರಿವಂಶ, ಶೂದ್ರಕಗಳಲ್ಲಿ ಕಂಡುಬರುತ್ತದೆ. ಪಂಪನ ಪೂರ್ವದಲ್ಲಿಯೆ ಚಂಪುವಿನ ಸ್ವರೂಪವಿದ್ದರೂ ಹರಿವಂಶ ಶೂದ್ರಕಗಳ ಸ್ವರೂಪ ಹೇಗಿತ್ತೆಂಬುದು ಖಚಿತವಾಗಿ ಗೊತ್ತಿಲ್ಲ. ಹರಿವಂಶ ಮತ್ತು ಶೂದ್ರಕ ಸಂಸ್ಕೃತ ಹಸ್ತಪ್ರತಿಗಳಾದರೂ ಚಂಪುವಿನ ಉಪವಿಭಾಗೀಕರಣ ಅಲ್ಲಿಲ್ಲವೆಂದ ಮಾತ್ರಕ್ಕೆ ಪಂಪನಲ್ಲಿದೆ ಎಂದು ಖಚಿತವಾಗಿ ಹೇಳುವುದು ತಪ್ಪಾಗುತ್ತದೆ. ಇದರಿಂದ ಗುಣವರ್ಮ ಮತ್ತು ಪಂಪರ ನಡುವಿನ ಚಂಪೂ ಸ್ವರೂಪದತ್ತ ಹೆಚ್ಚಿನ ಗಮನ ಹರಿಸಬೇಕಾಗಿದೆ. ಆದರೆ ಪಂಪನ ತರುವಾಯದ ಹಸ್ತಪ್ರತಿಗಳಲ್ಲಿ ಚಂಪೂ ಸಾಂಪ್ರದಾಯಿಕ ಮಾರ್ಗವನ್ನೇ ಕ್ರಮಿಸಿತು.

ಕನ್ನಡದ ಕವಿಗಳು ಚಂಪೂರೂಪವನ್ನು ಆಯ್ಕೆ ಮಾಡಿಕೊಂಡಿದ್ದರ ಹಿನ್ನೆಲೆಯನ್ನು ರಂ.ಶ್ರೀ ಮುಗಳಿಯವರು ಗುರುತಿಸುತ್ತಾ "ಕಾಲಮಾನದ ಅಗತ್ಯ ಮತ್ತು ತಮ್ಮ ಅಭಿವ್ಯಕ್ತಿಯ ಅಗತ್ಯಗಳೇ ಕಾರಣವೆನ್ನುತ್ತಾರೆ "(೧೯೮೫;೯೬) ಚಂಪೂಕಾವ್ಯ ಪರಂಪರೆ ಕನ್ನಡ ಕವಿಗಳ ಸ್ವಂತ ಅವಿಷ್ಕಾರವಾಗಿರುವುದರ ಜೊತೆಗೆ ಆ ಕಾವ್ಯದ ಮೂಲಕ ಲೌಕಿಕ; ಆಗಮಿಕವೆಂಬ ವರ್ಗೀಕರಣದಲ್ಲಿ ಕತೆ ಹೇಳುವ ನಿರ್ಧಾರವಾಗಲಿ 'ಸಮಸ್ತಭಾರತ' ಹಾಗೂ ಸಿಂಹಾವಲೋಕನ ಕ್ರಮಗಳಲ್ಲಿ ಪುರಾಣ ವಾಸ್ತವಗಳನ್ನು ಸಮೀಕರಿಸಿ ಮಹಾಭಾರತ ಕಥಾವಸ್ತುವನ್ನು ನಿರ್ವಹಿಸುವ ತಂತ್ರವಾಗಲಿ ಸಂಸ್ಕೃತ ಕಾವ್ಯ ಅಥವಾ ಸಾಹಿತ್ಯ ಪರಂಪರೆಗೆ ಅಪರಿಚಿತವಾದ ಸಂಗತಿಗಳಾಗಿವೆ. ಇಡೀ ಚಂಪೂ ಮಾರ್ಗದಲ್ಲಿ ಬಂದ ಆಂಡಯ್ಯನ 'ಕಾವ್ಯದ ಗೆಲ್ಲ', ದೇಸಿ ಪರಂಪರೆಯಲ್ಲಿ ಬಂದ 'ಕುಮಾರರಾಮನ ಸಾಂಗತ್ಯ', 'ಹರಿದಾಸರ ಕೀರ್ತನೆಗಳು' ಇವೆಲ್ಲ ಕನ್ನಡದ ನೆಲದಲ್ಲಿ ಸಂಭವಿಸಿದಂತವುಗಳು.

ಚಂಪೂ ಯುಗದ ನಂತರ ಹಸ್ತಪ್ರತಿ ರೂಪ ಪರಂಪರೆ ಭಿನ್ನ ಆಯಾಮ ಪಡೆದಿದ್ದು ವೀರಶೈವ ಯುಗದಲ್ಲಿ. ಇಲ್ಲಿ ಹಿಂದಿನ ಪರಂಪರೆಗಿಂತ ಬೇರೆಯಾದ ಹಲವು ರೂಪಗಳು ಬಳಕೆಗೆ ಬಂದವು. ವಚನ ಮತ್ತು ರಗಳೆ ಕೇಂದ್ರವಾಗಿ ಅದರ ಸುತ್ತಲೂ ಅನೇಕ ಬಗೆಯ ರೂಪಗಳು ಬಳಕೆಗೆ ಬಂದವು. ಮುಖ್ಯವಾಗಿ ವಚನ ಮತ್ತು ರಗಳೆ ರೂಪಗಳು ವೀರಶೈವ ಸಂದರ್ಭದಲ್ಲಿ ಎರಡು ಪ್ರಧಾನ ಘಟನೆಗಳಿಗೆ ಬಳಕೆಯಾದವು. ಒಂದು: ಶರಣರೆ ಕೇಂದ್ರವಾಗಿ ತಮ್ಮ ಅಭಿವ್ಯಕ್ತಿಯನ್ನು ವಚನರೂಪದಲ್ಲಿ ಪ್ರಕಟಗೊಳಿಸಿದ್ದು, ಎರಡು: ಶರಣ ಸಮುದಾಯದ ಬದುಕಿನ ವಸ್ತುವನ್ನು ಕೇಂದ್ರವಾಗಿರಿಸಿಕೊಂಡು ಅದೇ ಧರ್ಮದ ಕವಿಗಳು ಸಾಹಿತ್ಯ ನಿರ್ಮಿತಿಗೆ ತೊಡಗಿ, ಪ್ರತ್ಯೇಕವಾದ ರಗಳೆ ಷಟ್ಪದಿ ರೂಪಗಳನ್ನು ಅಸ್ತಿತ್ವಕ್ಕೆ ತಂದಿರುವುದು. ಇಲ್ಲಿಯೂ ಕೂಡಾ ಚಂಪೂ ಕೆಲಕಾಲ ದೈವತ್ವದ ಪ್ರತೀಕವಾಗಿ ಬಳಕೆಯಾಯಿತು. ಹಿಂದಿನ ಪರಂಪರೆಯನ್ನು ಪ್ರತಿಭಟಿಸುವುದರ ಮೂಲಕ ಹರಿಹರನಂತ ಕವಿಗಳು ಹೊಸ ರೂಪವೊಂದನ್ನು ಶೋಧಿಸಿದಾಗಲೂ ಆತನ ಗಿರಿಜಾ ಕಲ್ಯಾಣಕ್ಕೆ ಮಾಧ್ಯಮವಾಗಿದ್ದು ಚಂಪೂವೆ. ಇದೇ ಹೊತ್ತಿನಲ್ಲಿ ತ್ರಿಪದಿ, ಸಾಂಗತ್ಯ, ಷಟ್ಪದಿಯಂತಹ ರೂಪಗಳು ಜನಮಾಧ್ಯಮದ ರೂಪಗಳಾಗಿ ಬಳಕೆಯಾಗತೊಡಗಿದವು. ವಚನಕಾರರ ಕಾಲದ ನಂತರ ಹುಟ್ಟಿಕೊಂಡ ರಗಳೆ ಷಟ್ಪದಿ, ಸಾಂಗತ್ಯಗಳು, ಛಂದೋರೂಪದ ದೇಶೀಕಾವ್ಯಮಾರ್ಗವೊಂದನ್ನು ನಿರ್ಮಾಣ ಮಾಡಿದವು. ಮತ್ತು ಅವುಗಳ ವಸ್ತು ಹಿಂದಿನ ಇತಿಹಾಸ ಪುರಾಣಗಳಿಗಿಂತ ತೀರಾ ಭಿನ್ನವಾಗಿ ಸಮಕಾಲೀನ ಹಾಗೂ ಸಮೀಪಕಾಲೀನರಾಗಿದ್ದ ಬಸವಾದಿ ಮಹಾವ್ಯಕ್ತಿಗಳನ್ನು ಅವರಿಗೆ ಹಿನ್ನೆಲೆಯಾದ ಪುರಾತನ ಶಿವಶರಣರನ್ನು ವಸ್ತುವನ್ನಾಗಿ ಮಾಡಿಕೊಳ್ಳುವ ಮೂಲಕ ಪರಿಚಿತ ಭಾರತೀಯ ಕಥಾವಸ್ತು (ಚಂಪೂಕಾಲದ ರಾಮಾಯಣ ಮಹಾಭಾರತ) ಸಂಪ್ರದಾಯದಿಂದ ಬೇರೆಯಾದೊಂದು ಮಾದರಿಯನ್ನ ಹಾಕಿಕೊಟ್ಟಿತು. "ವಚನಾನಂತರದ ಕೇವಲ ಒಂದು ಶತಮಾನದ ಅವಧಿಯಲ್ಲಿ ರಗಳೆ, ಷಟ್ಪದಿ, ಸಾಂಗತ್ಯ

ಶತಕಗಳೆಂಬ ಹಲವಾರು ವಿವಿಧ ರೂಪಗಳು ಆ ಕಾಲದ ಸೃಜನಶೀಲತೆಯ ಉತ್ಕರ್ಷಗಳಾಗಿವೆ" (ಜಿ.ಎಸ್ .ಶಿವರುದ್ರಪ್ಪ ೧೯೮೬;೩೫).ಅಷ್ಟಕ ಮತ್ತು ಶತಕ ರೂಪಗಳು ಮಾರ್ಗಕಾವ್ಯದ ಕಾಲದಿಂದಲೂ ಬಳಕೆಯಲ್ಲಿವೆ. ಅಷ್ಟಕವೆಂಬ ಪ್ರಕಾರ ಕವಿರಾಜಮಾರ್ಗಕ್ಕಿಂತ ಹಿಂದಿನಿಂದಲೂ ರೂಢಿಯಲ್ಲಿದೆ ಎಂಬುದಕ್ಕೆ ಸು.ಕ್ರಿ.ಶ ೮೦೦ ರಲ್ಲಿದ್ದ ಸೈಗೊಟ್ಟ ಶಿವಮಾರನ 'ಶಿವಮಾರತತ್ವ' ಗಜಾಷ್ಟಕವೇ ನಿದರ್ಶನವಾಗಿದೆ. ಶತಕ ರೂಪ ಅಷ್ಟು ಪ್ರಾಚೀನವಲ್ಲ. ಕವಿಚರಿತೆಕಾರರ ಪ್ರಕಾರ ಸು ೧೦೭೦ ರಲ್ಲಿ ರಚಿತವಾದ ನಾಗವರ್ಮಾಚಾರ್ಯನ ವೈರಾಗ್ಯ ಶತಕ ಅಥವಾ ಚಂದ್ರ ಚೂಡಾಮಣಿ ಶತಕ ಮೊದಲನೆಯ ಶತಕ (ಆರ್.ನರಸಿಂಹಚಾರ್ ೧೬೭೧;೧೧೩) ಆದರೆ ಇದು ತನ್ನ ಮೂಲಸ್ವರೂಪದಲ್ಲಿ ಸಾರ್ಥಕತೆ ಪಡೆದಿದ್ದು ವೀರಶೈವರಲ್ಲಿ.

ಈ ಯುಗದಲ್ಲಿ ಸ್ತೋತ್ರಪರವಾದ ವಿಶೇಷ ರೂಪ ಪರಂಪರೆಯೊಂದು ನಿರ್ಮಾಣವಾಯಿತು. ದೇವರ ಮತ್ತು ಹಿಂದಿನ ಶಿವಶರಣರ ಸ್ತೋತ್ರ ಮಾಡುವುದು ಈ ಪರಂಪರೆಯು ಬಹುಮುಖ್ಯ ಉದ್ದೇಶವಾಯಿತು. ೧೨ನೆಯ ಶತಮಾನದಿಂದಲೆ ಇದರ ಸ್ವರೂಪವನ್ನು ಗುರುತಿಸಬಹುದು. ತಾರಾವಳಿ, ಸ್ವರವಚನ, ನಾಂದ್ಯ, ಅಷ್ಟಕ, ಶತಕ, ದಂಡಕದಂತಹ ರೂಪಗಳು ಈ ಸ್ತೋತ್ರ ಗಣಕ್ಕೆ ಸೇರುವ ಘಟಕಗಳು. ಹಸ್ತಪ್ರತಿ ನಿರ್ಮಾಣದಲ್ಲಿ ಈ ರೂಪಗಳು ಯಾಕೆ ಮುಖ್ಯವಾಗದೆ ಹೋದವು? ಎಂಬುದು ಗಮನಾರ್ಹ ಪ್ರಶ್ನೆ. ಗಂಭೀರ ಚಿಂತನೆ ಮತ್ತು ಸತ್ವಪೂರ್ಣವಲ್ಲದ ತೇಲಿಸಿಬಿಡಬಹುದಾದಂತಹ ವಸ್ತುವನ್ನು ತಮ್ಮೊಳಗೆ ಕಟ್ಟಿಕೊಂಡಿದ್ದರಿಂದ ಆ ಹೊತ್ತಿನ ಜನವರ್ಗಕ್ಕೆ ಉತ್ಸಾಹವನ್ನು ಮೂಡಿಸುವಲ್ಲಿ ಸೋತುಹೋದವು. ಕೇವಲ ದೇವರ ನಾಮಾವಳಿಯನ್ನು ಮತ್ತು ರಾಜರನ್ನು ಕುರಿತು ವಿವಿಧ ವಿಶೇಷಗಳೊಡನೆ ಗುಣಗಾನ ಮಾಡುವ ಹೊಗಳಿಕೆಯಲ್ಲಿ ಮಾತ್ರ ತೊಡಗಿದ್ದರಿಂದ ಈಶ್ವರ ದಂಡಕ, ಮಹಾರುದ್ರನ ದಂಡಕ, ವೀರಭದ್ರ ದಂಡಕ, ಮತ್ತು ಕೊಟ್ಟೂರ ಬಸವೇಶ್ವರನ ದಂಡಕದಂತಹ ಹಸ್ತಪ್ರತಿಗಳು ಮೂಲೆಗುಂಪಾದವು (ಗೌರವ;೧೯೮೫:೬೨೫). ಸಾಹಿತ್ಯದ ಪರಂಪರೆಗಳು ಕೆಲವೊಮ್ಮೆ ಹೀಗೆ ತಪ್ಪಿಸಿಕೊಳ್ಳುತ್ತವೆ.

ಈ ಬಗೆಯ ಪರಂಪರೆ ಮುಖ್ಯವಾಗಿ ದೇವರನ್ನು ಸ್ತೋತ್ರ ಮಾಡುವುದಾಗಿತ್ತು. ಆದರೆ ಇದು ಎಲ್ಲರಿಗೂ ಸಾಧ್ಯವಿರಲಿಲ್ಲ. ಯಾಕೆಂದರೆ ಇದು ಅನಕ್ಷರಸ್ಥರೆ ಹೆಚ್ಚಾಗಿರುವ ಸಮಾಜ. ಇಂಥಲ್ಲಿ ಮನುಷ್ಯನ ಮೊರೆ ಮುಟ್ಟಿಸಲು ಪುರೋಹಿತನೋ, ಪೂಜಾರಿಯೋ, ದಲ್ಲಾಳಿಯಾಗುತ್ತಾನೆ. ಇವರು ಇತರರ ಪರವಾಗಿ ದೇವಸ್ತೋತ್ರ ಮಾಡುವ ಮಂದಿ. ಹೀಗಾಗಿ ಸ್ತೋತ್ರ ಸಂಸ್ಕೃತಿ ತನಗೇ ತಾನೇ ಸ್ವತಂತ್ರ ಅಸ್ತಿತ್ವವುಳ್ಳದ್ದಲ್ಲ. "ಅದು ಶ್ರೇಣಿಕೃತ ಸಮಾಜದ ಒಂದು ಲಕ್ಷಣ ಹಾಗೂ ಸಾಧನ ಮಾತ್ರವಾಯಿತು" (ಬರಗೂರು ರಾಮಚಂದ್ರಪ್ಪ;೧೯೮೯:೫).

ವೀರಶೈವ ಸಾಂಪ್ರದಾಯಿಕತೆಯಂತೆ ಭಕ್ತಿಯನ್ನು ವೈಭವೀಕರಿಸುವ ನೆಲೆಯಲ್ಲಿ ಸುಳಾದಿ, ಉಗಾಭೋಗ, ಹಾಡುಗಬ್ಬ, ಕೀರ್ತನೆಗಳಂತ ರೂಪಗಳನ್ನು ಹರಿದಾಸರು ಜಾರಿಗೆ ತಂದರು. ಸಂಗೀತದಂತ ಒಂದು ಆಕರ್ಷಕ ಮಟ್ಟ ಸೇರಿಕೊಂಡು ಈ ರೂಪಗಳು ಹಿಂದಿನ ರೂಪಗಳಿಗಿಂತ ಬಹುಬೇಗನೆ ಜನಪ್ರಿಯವಾದವು. ಸಂಕೀರ್ಣ ಆಚರಣೆ, ಸಂಸ್ಕೃತ ಭೂಯಿಷ್ಟ ಭಾಷೆಯನ್ನು ಬಳಸದೆ ಆಡುಮಾತಿನ ಮೂಲಕ ಸಾಮಾಜಿಕ ಪರಿಸರದೊಳಗಿನ ಮೌಲ್ಯಗಳನ್ನು ಜೀವನ ಕ್ರಮಗಳನ್ನು ತಿಳಿಸಿ ಹೊರಟವು. ಆದರೆ ವೈದಿಕ ಪರವಾದ ಇವರ ಸಾಹಿತ್ಯಿಕ ಅಭಿವ್ಯಕ್ತಿಗೆ ವೈದಿಕ ಪರವಾದ ರೂಪಗಳೇ ಸೇರುವುದರ ಮೂಲಕ ಎರಡಕ್ಕೂ ಮಿತಿಯುವಾದ ಬದ್ಧತೆ ಉಂಟಾಯಿತು. ಇವರ ಅತಿಯಾದ ಹರಿಭಕ್ತಿ ನೀತಿ, ಕೃಷ್ಣಲೀಲೆ, ಜೀವನ ವಿರೋಧಿಯಾದ ಭಗವದ್ಗಿತೆಯ ಅವೈಚಾರಿಕತೆಯಿಂದ ಕೆಲವೆ ಜನವರ್ಗದ ಪರಿಮಿತಿಯಲ್ಲಿ ಬದುಕುವಂತಾಯಿತು. ವಿಜಯನಗರ ಮಹಾಸಾಮ್ರಾಜ್ಯವನ್ನು ವೈದಿಕ ಪಾಳೆಗಾರಿಕೆ ಒಳಗು ಮಾಡುವುದರ ಮೂಲಕ ಆ ಕಾಲದ ಸಂಸ್ಕೃತಿಯೇ ನಮ್ಮದೆಂದು ನಂಬಿಸುವ ಅನೇಕ ರೂಪಗಳು ಆ ಹೊತ್ತಿಗೆ ಜನಪ್ರಿಯ ಪಡೆಯುವುದಕ್ಕೆ ಸಾಧ್ಯವಾಯಿತು. ವೇದಾಂತ,

ಉಪನಿಷತ್ತು ಹಾಗೂ ಭಗವದ್ಗೀತೆಗಳ ಮೂಲಕ ಭಕ್ತ ಹರಿಯನ್ನು ಸಾಕ್ಷಾತ್ಕರಿಸಿಕೊಳ್ಳಬೇಕೆಂಬ ಸೂಳ್ನುಡಿ, ಕೀರ್ತನೆಗಳ ಹೇಳಿಕೆಗಳು ಬರೀ ಪೋಷಿತ ಅನಾಚಾರದ ವಾಕ್ಯಗಳಾದವು.

೧೮-೧೯ನೆಯ ಶತಮಾನದ ಹೊತ್ತಿಗೆ ಹಿಂದಿನ ಹರಿದಾಸ ಪರಂಪರೆಯನ್ನು ಒಳಗೊಂಡಂತೆ ತತ್ವಪದಕಾರರ ಕಾಲಕ್ಕೆ ವಿಶೇಷ ಬಗೆಯ ರೂಪಗಳು ಪ್ರಯೋಗವಾಗತೊಡಗಿದವು. ಗ್ರಂಥಸ್ಥ ಮತ್ತು ಮೌಖಿಕ ಮಾದರಿಯ ನಡುವಿನ ಒಂದು ಅಮೂರ್ತರೂಪ ಈ ಹೊತ್ತಿಗೆ ಬಳಕೆಯಾಯಿತು. ಸರ್ಪಭೂಷಣ ಶಿವಯೋಗಿ, ಶಿಸುನಾಳ ಶರೀಫ, ಕಡಕೋಳ ಮಂಜಪ್ಪ, ತಿಂಥಣಿ ಮೋನಪ್ಪಯ್ಯ, ಕೂಡಲೂರು ಬಸವಲಿಂಗ, ಮೋಟ್ನಳ್ಳಿ ಹಸನಸಾಬ ಮುಂತಾದವರು ಇಂಥ ಪರಂಪರೆಗೆ ಸೇರಿದವರು. ಇವರ ಹಸ್ತಪ್ರತಿಗಳು ಗ್ರಂಥಸ್ಥರೂಪದಲ್ಲಿಯೂ ಲಭ್ಯವಾಗುವ ಹೊತ್ತಿಗೆ ಮೌಖಿಕ ರೂಪದಲ್ಲಿಯೂ ಜನಸಮುದಾಯದೊಳಗೆ ಮನೆ ಮಾಡಿವೆ. ಇಂತಹ ರೂಪಗಳು ಹಾಡುವವರ ಮೂಲಕ ಕೈಬರಹಕ್ಕಿಳಿದವು ಅಥವಾ ಕೈಬರಹದ ನಂತರವೇ ಮೌಖಿಕರೂಪಕ್ಕೆ ತಿರುಗಿದವೋ ಎಂಬುದನ್ನು ಕಂಡುಕೊಳ್ಳಬೇಕಾಗಿದೆ. ಅಕ್ಷರಬಲ್ಲ ಕವಿಗಳು ತಮ್ಮ ಅಭಿವ್ಯಕ್ತಿಯನ್ನು ಹಸ್ತಪ್ರತಿಯಲ್ಲಿ ದಾಖಲಿಸಿರಬಹುದು;ಹಾಗೆಯೇ ಅಕ್ಷರ ಬಲ್ಲದ ಕವಿಗಳ ಹಾಡುಗಳನ್ನು ಅವರ ಶಿಷ್ಯಪರಂಪರೆ ಸಂಗ್ರಹಿಸಿ ದಾಖಲಿಸಿರಬಹುದಾದ ಸಾಧ್ಯತೆಯನ್ನು ತಾತ್ಕಾಲಿಕವಾಗಿ ನಂಬಬಹುದು. ಹೀಗೆ ಬಾಯಿಮಾತಿನ ಮೂಲಕ ಅಕ್ಷರ ರೂಪಕ್ಕಿಳಿಯುವ, ಅಕ್ಷರ ಪರಂಪರೆಯಿಂದ ಬಾಯಿಮಾತಿಗೆ ದಾಟುವ ಈ ಕ್ರಿಯೆ ೧೭-೧೮ನೇ ಶತಮಾನದ ನಂತರ ತತ್ವಪದಕಾರರ ಕಾಲಕ್ಕೆ ಹೆಚ್ಚಾಗಿ ಕಂಡುಬಂದಿತು. ಕುಮಾರವ್ಯಾಸ ಮತ್ತು ಲಕ್ಷ್ಮೀಶರಂತ ಕವಿಗಳು ಅಕ್ಷರ ಮತ್ತು ಮೌಖಿಕ ರೂಪಗಳೆರಡಕ್ಕೂ ಸಲ್ಲುವಂತದಾರು. ಆದ್ದರಿಂದಲೆ ಕುಮಾರವ್ಯಾಸ/ಭಾರತ ಮತ್ತು ಜೈಮಿನಿ ಭಾರತಗಳನ್ನು ಅನಕ್ಷರಸ್ಥ ಜನಸಮುದಾಯ ನಿಚ್ಚಳವಾಗಿ ಹಾಡುತ್ತಿದ್ದರು. ಇಂಥ ಅನೇಕ ರೂಪಗಳನ್ನು ಸಂಪಾದಿಸಿದ ಸಂಗ್ರಹಕಾರರು ತಮ್ಮ ಮುನ್ನುಡಿಯಲ್ಲಿ ಆಕರದ ಸ್ವರೂಪವನ್ನು ಹಸ್ತಪ್ರತಿ ಮತ್ತು ಹಾಡುಗಳನ್ನು ಬಳಸಿಕೊಂಡಿದ್ದರ ಹಿನ್ನೆಲೆಯನ್ನು ವಿವರಿಸುವ ಸಂದರ್ಭದಲ್ಲಿ ಮೂರನೆಯ ಈ ಹಸ್ತಪ್ರತಿ ಪರಂಪರೆಯನ್ನು ಸೂಕ್ಷ್ಮವಾಗಿ ಗಮನಿಸಬಹುದು. ಅಕ್ಷರ ಮತ್ತು ಅಕ್ಷರವಲ್ಲದ ಇಂಥ ವರ್ಗದ ಹಸ್ತಪ್ರತಿಗಳ ಬಗ್ಗೆ ಚರ್ಚೆ ನಡೆದು ಖಚಿತ ಹೆಸರನ್ನು ಕೊಡುವ ಪ್ರಯತ್ನವೊಂದು ನಡೆಯಬೇಕಿದೆ.

ಒಟ್ಟು ಕನ್ನಡ ಹಸ್ತಪ್ರತಿಗಳ ಸಾಹಿತ್ಯಿಕ ರೂಪಗಳು ಅನೇಕ ವರ್ಗದ ದೇವತೆ ಮತ್ತು ಅಮಾನುಷ ಶಕ್ತಿಯೊಳಗೆ ಅಡಗಿಕೊಳ್ಳುವ ಪ್ರಯತ್ನ ಮಾಡುತ್ತಿವೆ. ದೈವತಾಲೀಲೆ, ಅತಿಯಾದ ಭಕ್ತಿ, ರಾಜರಪ್ರಭುತ್ವ ಶಕ್ತಿಯನ್ನು ಸಾಮಾಜಿಕ ಪರಿಸರದಲ್ಲಿ ನೆಲೆಗೊಳಿಸುವುದರ ಮೂಲಕ ಸಮುದಾಯಪರ ರೂಪಗಳ ಧ್ವನಿಯನ್ನು ಬೇಕಂತಲೆ ಹತ್ತಿಕ್ಕಲಾಗಿದೆ. ಕನ್ನಡ ಜೈನಕವಿಗಳು ಚಂಪೂರೂಪಗಳಲ್ಲಿ ತೀರ್ಥಂಕರರನ್ನು, ವೀರಶೈವರು ಶರಣರನ್ನು, ಹರಿದಾಸರು ಶ್ರೀಕೃಷ್ಣನನ್ನು ವೇದಪುರುಷನಿಂದ ಹಿಡಿದು ಪುರೋಹಿತ ಹಾಗೂ ಅಧಿಕಾರಿಶಾಹಿಯ ವರ್ಗದವರೆಗೂ ವಿವಿಧ ರೀತಿಯಲ್ಲಿ ನಿರೂಪಿಸುತ್ತಾರೆ. ಇಂಥಲ್ಲಿ ಪ್ರಭುತ್ವದ ಪಾತ್ರಗಳು ಮೇಲುಗೈ ಸಾಧಿಸಿ ಸಾಮುದಾಯಿಕ ಪಾತ್ರದ ರೂಪಗಳು ಈ ನಿರಂತರ ಹೋರಾಟದಲ್ಲಿ ಅಂತರ್ಗತವಾಗಿ ಬಿಡುತ್ತವೆ. "ಮನುಜರ ಮೇಲೆ, ಸಾವವರ ಮೇಲೆ, ಕನಿಷ್ಠರ ಮೇಲೆ" ಕಾವ್ಯವನ್ನು ಬರೆಯುವುದಿಲ್ಲ ಎಂಬ ಹರಿಹರನ ನಿಷ್ಠೆಯ ಮಾತು ಸ್ಪಷ್ಟವಾಗಿ ಸಾಮಾಜಿಕವಾಗಿ ಕೆಳವರ್ಗದವರನ್ನು ನಿರಾಕರಿಸಿದ ಧೋರಣೆಯಾಗಿದೆ. ಇದರಿಂದ ಧಾರ್ಮಿಕ, ಲೌಕಿಕ ಶಾಸ್ತ್ರಗಳಂತ ರೂಪಗಳನ್ನು ಬಿಟ್ಟರೆ ಸಮುದಾಯಪರ ಹಸ್ತಪ್ರತಿಗಳು ಯಾಕೆ ಹುಟ್ಟಿಕೊಳ್ಳಲಿಲ್ಲ ಎಂಬ ಪ್ರಶ್ನೆಗೆ ಉತ್ತರ ಸಹಜ ಹಾಗೂ ನೇರವಾಗಿದೆ. ಕನ್ನಡ ಹಸ್ತಪ್ರತಿಯ ಸಾಹಿತ್ಯಿಕ ರೂಪಗಳು ಮುಖ್ಯವಾಗಿ ಶಿಷ್ಟ ಮತ್ತು ಸಾಮಾಜಿಕವಾದ ಶ್ರೇಣೀಕೃತ ವ್ಯವಸ್ಥೆಯೊಂದನ್ನು ಹುಟ್ಟು ಹಾಕಿದವು. ಬ್ರಾಹ್ಮಣೀಕರಣ, ವೇದಾಂತದ ಜ್ಞಾನ ಮತ್ತು ಕ್ಷತ್ರಿಯ ಬದುಕಿನ ದಾನ, ಶೌರ್ಯ, ವೀರ ಸಿದ್ಧಾಂತಗಳನ್ನು ವಿವರಿಸುವ ನೆಪದಲ್ಲಿ ಶಿಷ್ಟ

ರೂಪಗಳು, ಹುಟ್ಟಿದವು. ಆದರೆ ಶೂದ್ರ ಪರಂಪರೆ ಮತ್ತು ಕೆಳವರ್ಗದ ಬದುಕನ್ನು ವಿವರಿಸುವಾಗ ಈ ರೂಪಗಳಿಗೆ ಮುಜುಗರ ಉಂಟಾಗುತ್ತದೆ. ಇಂತಹ ಸಂಸ್ಕೃತಿಯ ಬಗ್ಗೆ ಮಾತಾಡುವಾಗ ಕೇವಲ ವ್ಯಂಗದ ಮಾತುಗಳಾಗುತ್ತವೆ.

ಪಂಡಿತರುಂ ವಿವಿಧ ಕಳಾ
ಮಂಡಿತರುಂ ಕೇಳತಕ್ಕ ಕೃತಿಯಂ ಕೃತಿಯೊಳ್
ಕಂಡರ್ ಕೇಳ್ವೊಡೆ ಗೊರವರ
ದುಂಡುಚಿಯೆ ಬೀದಿವರೆಯ ಬೀರನಕಥೆಯಿ--

ಎಂಬ ಪದ್ಯದ ಮೂಲಕ ಮಧುರ ಕವಿ ತನ್ನ 'ಧರ್ಮಪುರಾಣ'ದಲ್ಲಿ ಹೇಳುವ ಗೊರವರ ದುಂಡಚಿ, ಬೀದಿವರೆಯ ಬೀರನಕಥೆಯಂತ ನೂರಾರು ರೂಪಗಳು ಈ ಬಗೆಯ ಅಪಾಯಕ್ಕೆ ಸಿಲುಕಿವೆ. ಇದು ಆಳುವ ವರ್ಗದಿಂದ ಇತರ ವರ್ಗಗಳನ್ನು ತುಳಿಯುವ ಪ್ರಯತ್ನವಾಗಿದೆ.

ಅರ್ಥಪೂರ್ಣ ಅಭಿವ್ಯಕ್ತಿಯೊಂದಕ್ಕೆ ಅವಕಾಶ ನೀಡಿದರೆ ಅದು ತನ್ನ ಅಸ್ತಿತ್ವನ್ನೆ ನಿರ್ಮಿಸಿಬಿಡಬಹುದೆಂಬ ಕಾರಣದಿಂದ ಇಂಥ ರೂಪಗಳಿಗೆ ಅವಕಾಶ ನೀಡಲಿಲ್ಲ. ಏಕೆಂದರೆ ಪ್ರತಿಹಂತದಲ್ಲಿ ಇಲ್ಲಿ ನಡೆದಿದ್ದು ವರ್ಗಹೋರಾಟ. ಇದರಿಂದ ಸಾಮಾಜಿಕ ಮತ್ತು ರಾಜಕೀಯ ಚಳುವಳಿಗಳು ಈ ರೂಪಗಳ ಮೇಲೆ ವಿಶೇಷವಾದ ಪರಿಣಾಮವನ್ನುಂಟು ಮಾಡಿದವು. ಜನತೆಯ ಒತ್ತಾಸೆಯಿಂದ ಬಾಳಿದ ರೂಪ ರಾಜಶಕ್ತಿಯಿಂದ ಭಿನ್ನವಾಗಿರುತ್ತದೆ. ಆದ್ದರಿಂದಲೇ ದೇವರೂಪದ ಚಂಪೂ, ವಚನ, ರಗಳೆ, ಷಟ್ಪದಿಗಳಿಗೂ ಜನರೂಪದ ಓವನಿಗೆ, ಒನಕೆವಾಡು, ಏಳೆ, ತ್ರಿಪದಿಯಂತಹ ರೂಪಗಳಿಗೂ ತಾತ್ವಿಕವಾದ ಭಿನ್ನತೆಯಿದೆ. ಸಮುದಾಯಗಳ ಸಂವೇದನೆಯನ್ನು ಸಮುದಾಯದ ಹೋರಾಟಗಳ ಬದಲಾಗಿ ರಾಜಕೀಯ ಹೋರಾಟ, ಅಂತರ್ ಯುದ್ಧಗಳೇ ನಿರ್ಧರಿಸಿದವು. ಅಂತರ್ ಯುದ್ಧಗಳು ಪ್ರತಿಷ್ಠಿತ ಶಕ್ತಿಗಳ ನಡುವೆಯೇ ನಡೆಯುವ ಕಾರಣವಾಗಿ ಇಲ್ಲಿ ಪ್ರತಿಷ್ಠಿತರೂಪಗಳು ಮಾತ್ರ ಭದ್ರವಾಗಿ ನೆಲೆಯೂರಲು ಸಾಧ್ಯವಾಯಿತು. ಚಂಪೂ, ರಗಳೆ, ಷಟ್ಪದಿಗಳು ಪ್ರತಿಷ್ಠಿತ ಕ್ಷತ್ರಿಯ ಯುದ್ಧ ಹಾಗೂ ಬದುಕನ್ನು ವರ್ಣಿಸಿದರೆ ತ್ರಿಪದಿ, ವಚನ, ಸಾಂಗತ್ಯದಂತ ರೂಪಗಳು ಪ್ರತಿಷ್ಠಿತವರ್ಗದ ಸಾಮಾಜಿಕ ಜೀವನಕ್ರಮ ಹಾಗೂ ಶೃಂಗಾರದ ವೈಭವವನ್ನು ವರ್ಣಿಸುವ(ಉದಾ:ಭರತೇಶ ವೈಭವ) ರೂಪಗಳಾದವು.

ಒಂದು ಸಾವಿರ ವರ್ಷದ ಕನ್ನಡ ಹಸ್ತಪ್ರತಿಗಳ ಸಾಹಿತ್ಯಿಕ ಸ್ವರೂಪವನ್ನು ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕವಾಗಿ ನೋಡುವ ಧೋರಣೆಯೊಂದೆ ಈಗ ಅತ್ಯಂತ ಮುಖ್ಯವಾಗಿದೆ. ಇಂಥ ಧೋರಣೆಯ ಮೂಲಕ ರೂಪಗಳ ಅವಸ್ಥಾಂತರವನ್ನು ಗುರುತಿಸಿಕೊಂಡರೆ ಮಾತ್ರ ಇಂದಿನ ಸಾಹಿತ್ಯ ಸಂದರ್ಭ ಸ್ಪುಟಗೊಳ್ಳುತ್ತದೆ.

ಅಡಿಟಿಪ್ಪಣಿಗಳು

೧.ಕೆ.೭೫:೫ ಸಂ.ಎಚ್ ದೇವೀರಪ್ಪ :೧೯೬೨ ; ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯದ ಕ.ಹ.ವ.ಸೂ., ಸಂ:೧, ಪು: ೧೨೦

೨.ಕೆ.ಎ.೨೩೮:ಸಂ.ಎಚ್ .ದೇವೀರಪ್ಪ:೧೯೬೨;ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ, ಸಂ:೩ ಪು:೩೨೧

೩.ಕೆ.ಎ.೩೦೨; ಅದೇ; ಪುಟ:೪೩

೪.ಕೆ.೫೧೦; ಅದೇ ; ಪುಟ:೨೪೫

೫.೨೬೧:೫; ಸಿರಿಗೆರೆ ಮಠದ ಪುಸ್ತಕ ಭಂಡಾರದಲ್ಲಿನ ಹಸ್ತಪ್ರತಿ

೬.೬೬೨:೩; ಬೆಂಗಳೂರು ವಿಶ್ವವಿದ್ಯಾಲಯ ಹಸ್ತಪ್ರತಿ ವಿಭಾಗದ ಹಸ್ತಪ್ರತಿ

೭.ಬಿ. ೬೭೩;---ಅದೇ-

೮.೩೪೩೦: ಕರ್ನಾಟಕ ವಿಶ್ವವಿದ್ಯಾಲಯ, ಕನ್ನಡ ಅಧ್ಯಯನ ಪೀಠದ ಹಸ್ತಪ್ರತಿ.

## ೨:ವಿಷಯ ಸ್ವರೂಪ

ಹಿಂದಿನ ಅಧ್ಯಾಯದಲ್ಲಿ ಹಸ್ತಪ್ರತಿಗಳ ಸ್ಥೂಲವಾದ ರೂಪಸ್ವರೂಪವನ್ನು ಅದರ ಚಾರಿತ್ರಿಕ ಗತಿಯಲ್ಲಿ ವಿಶ್ಲೇಷಣೆಮಾಡಲಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ಕನ್ನಡ ಹಸ್ತಪ್ರತಿಗಳ ಸಾಹಿತ್ಯಿಕ ವಿಷಯ ಸ್ವರೂಪವನ್ನು ಕುರಿತು ವಿವೇಚಿಸುವ ಪ್ರಯತ್ನ ಮಾಡಲಾಗಿದೆ. ರೂಪ ಹಾಗೂ ವಿಷಯ ಎರಡೂ ಹಸ್ತಪ್ರತಿ ಸಂದರ್ಭದಲ್ಲಿ ಒಟ್ಟೊಟ್ಟಿಗೆ ಸಾಗುವ ಪ್ರಕ್ರಿಯೆಗಳಾಗಿದ್ದರಿಂದ ರೂಪ ಸ್ವರೂಪದ ನೆಲೆಯಲ್ಲಿಯೇ ವಿಷಯ ಸ್ವರೂಪವನ್ನಿಲ್ಲಿ ಚರ್ಚಿಸಲಾಗಿದೆ.

ಈಗಾಗಲೇ ಕನ್ನಡ ಸಾಹಿತ್ಯದ ರೂಪ, ವಿಷಯ ಕುರಿತಂತೆ ಸಾಕಷ್ಟು ಚರ್ಚೆನಡೆದಿದೆ. ವಸ್ತುವನ್ನು ಹಸ್ತಪ್ರತಿಗಳು ಬಳಸಿಕೊಂಡು ವಿವಿಧ ಕಥಾತ್ಮಕ, ಕಾವ್ಯಾತ್ಮಕ ಅಂಶಗಳ ಹಿನ್ನಲೆಯಲ್ಲಿಯೂ ರೂಪವನ್ನು ಕನ್ನಡ ಸಾಹಿತ್ಯ ನಿರ್ಮಿಸಿಕೊಂಡ ರಾಚನಿಕ ವಿನ್ಯಾಸದ ಹಿನ್ನಲೆಯಲ್ಲಿಯೂ ಚರ್ಚಿಸಲಾಗಿದೆ. "ಸಮಕಾಲೀನ ವೈರುದ್ಯಗಳೇ ಹೊಸ ಪ್ರಕಾರ ರೂಪಗಳಿಗೆ ಮುಖ್ಯ ಕಾರಣವಾಗುತ್ತವೆ. ಮತ್ತು ರೂಪಗಳ ಅಂತರ್ಗತ ಶಕ್ತಿಯ ಮೂಲಕವೆ ವಸ್ತುವಿವರಗಳು ನಿರ್ಣಾಯಕ ಪಾತ್ರವನ್ನು ತಲುಪುತ್ತವೆ." (ಬರಗೂರು ರಾಮಚಂದ್ರಪ್ಪ;೧೯೯೩;೧೪ ರೂಪ ಮತ್ತು ವಿಷಯ ಒಂದಕ್ಕೊಂದು ಭಾಂದವ್ಯ ಹೊಂದಿರುವ ಪರಿಕರಗಳಾಗುವುದರಿಂದಲೇ ಪರಂಪರೆಯಲ್ಲಿ ರೂಪ ಹಾಗೂ ವಿಷಯಗಳನಡುವೆ ಒಂದು ವಿಚಿತ್ರವಾದ ಆದರೆ ಅನನ್ಯವಾದ ಸಂಬಧವೊಂದು ಏರ್ಪಡುತ್ತಲೆ ಬಂದಿದೆ. ಅಂದರೆ ರೂಪದ ಜರೂರಿನಿಂದಾಗಿಯೇ ವಿಷಯವೂ ವಿಷಯದ ಕಾರಣವಾಗಿಯೇ ರೂಪವೂ ಇಲ್ಲಿ ವ್ಯತ್ಯಾಸವಾಗುತ್ತ ಹೋಗುತ್ತದೆ. ಇದರಿಂದಾಗಿ ಹಸ್ತಪ್ರತಿ ಶಾಖೆ ಸಾಹಿತ್ಯ ಚರಿತ್ರೆಯ ಅಥವಾ ಸಾಹಿತ್ಯ ಪರಂಪರೆಯ ಪರಿಕಲ್ಪನೆಗಿಂತ ಬೇರೆಯಾಗಿಯೇ ಸಾಗುತ್ತದೆ.

ಕನ್ನಡ ಹಸ್ತಪ್ರತಿ ವಿಷಯದಲ್ಲಿ ಕೇವಲ ಸಾಹಿತ್ಯಿಕ ಪ್ರಧಾನವಾದ ಸ್ವರೂಪವಿಲ್ಲ. ಅಲ್ಲಿ ಕಲೆ ಧರ್ಮ,ಸಮಾಜ, ಅರ್ಥ.ಜನಾಂಗ ಸಮುದಾಯ ಒಕ್ಕೂಟ ರಾಜಸತ್ತೆ. ಬಂಡವಾಳಶಾಹಿ, ಪುರೋಹಿತಶಾಹಿ, ಮತಪ್ರಚಾರಕ ಸಂಸ್ಥೆಗಳು ಮತೀಯ ಶಕ್ತಿಗಳು ಹಾಗೆ ಸಂಸ್ಕತಿ ಮತ್ತು ವಸಾಹತೋತ್ತರ ಸಂಸ್ಕೃತಿಯೆಂಬ ಗೋಣಿಚೀಲದಲ್ಲಿ ಏನೆಲ್ಲಾ ತುಂಬಬಹುದೋ ಅಂತಹ ಘಟಕಗಳೆಲ್ಲ(unit) ಕನ್ನಡ ಹಸ್ತಪ್ರತಿಗಳ ವಿಷಯಸ್ವರೂಪದಲ್ಲಿವೆ. ಆದ್ದರಿಂದ ವಸ್ತುವಿಗೆ ಮಾತ್ರವಲ್ಲದೆ ನಾವು ಕಲ್ಪಿಸಿಕೊಂಡ ಮೇಲಿನ ಎಲ್ಲ ಪರಿಕಲ್ಪನೆಗಳೊಂದಿಗೆ ಹಸ್ತಪ್ರತಿಗಳ ವಿಷಯ ಸಂಪತ್ತನ್ನು ಏಕೀಭವಿಸಿ ನೋಡಲಾಗಿದೆ.ಹಸ್ತಪ್ರತಿಗಳ ಒಳಹೊಕ್ಕು ಶೋಧಿಸಿದಾಗ ಅವುಗಳು ಏನನ್ನು ಹಿಡಿದಿಟ್ಟುಕೊಂಡಿವೆ. ಎನ್ನವುದು ಕೂಡಾ ಇದರಿಂದ ಗೊತ್ತಾಗುತ್ತದೆ.

ಮನುಷ್ಯನ ಅಭಿವ್ಯಕ್ತಿ ಸಂಜ್ಞೆ,ಲಿಪಿಗಳಂತ ಭಾಷೆಯಿಂದ ಆರಂಭವಾಯಿತು. ಯಾವುದೇ ಭಾಷೆಯ ಸಾಹಿತ್ಯದ ಆರಂಭಕೂಡಾ ಬಹುಶಃ ಹೀಗೆಯೇ ಆಗಿದೆ. ಒಂದು ಸಾಹಿತ್ಯಿಕ ವಿಷಯದಂತಹ ಪರಿಕಲ್ಪನೆಯ ಉಗಮ ಸ್ವರೂಪವನ್ನು ಖಚಿತವಾಗಿ ಹೇಳುವದು ತುಂಬಾಕಷ್ಟ. ಕನ್ನಡಹಸ್ತಪ್ರತಿ ವಿಷಯಸ್ವರೂಪವನ್ನು ವಿವೇಚಿಸುವಾಗ ಈ ಮಾತು ಹಿನ್ನೆಲೆಯಾಗಿ ನಿಲ್ಲುತ್ತದೆ.

ಉಪವಾಸ ಧಾರ್ಮಿಕ ಛಾಯೆಯುಳ್ಳದಾಗಿ ವ್ಯಕ್ತಿಯ ನೆಲೆಯಲ್ಲಿ ನಿಂತಿತೆ ಹೊರತು ಅದು ಗಾಂಧೀಜಿಯವರ ಸಿದ್ಧಾಂತದಂತೆ ಒಟ್ಟು ಸಾಮಾಜಿಕ ಅನಿಷ್ಟಗಳ ಪ್ರತಿಭಟನೆಯ ಅಸ್ತ್ರವಾಗಲಿಲ್ಲ. ಕನ್ನಡ ಹಸ್ತಪ್ರತಿಗಳ ವಿಷಯದುದ್ದಕ್ಕೂ ಈ ಬಗೆಯ ವೈರುದ್ಧ್ಯಗಳು ಕಂಡು ಬರುವದರಿಂದ ಜೈನ ಸಿದ್ಧಾಂತದ ವಿಷಯ ಸ್ವರೂಪಕ್ಕೂ ಗಾಂಧಿನೆಲೆಯವಿಷಯ ಸ್ವರೂಪಕ್ಕೂ ಇರುವ ಅರ್ಥವ್ಯತ್ಯಾಸಗಳನ್ನು ಕಂಡುಕೊಳ್ಳುವ ಕೆಲಸ ಈಗ ತುರ್ತಾಗಿ ನಡೆಯಬೇಕಿದೆ.ಜೈನರ ಉಪವಾಸ ಸಿದ್ಧಾಂತ ಮೋಕ್ಷದ ಪದವಿಗಿರುವ ಧಾರ್ಮಿಕ ಅರ್ಹತೆ ಎಂದು ತಿಳಿದರೆ ಮಾತ್ರ ಸಾಲದು. ಗಾಂಧಿ ನೆಲೆಯಜನಾಂಗ ನಿಷ್ಠ ನೆಲೆಗಳತ್ತ ನಮ್ಮ ಅಧ್ಯಯನ ಕ್ರಮಗಳು ಸಾಗಬೇಕಾಗಿದೆ. ಈ ಸಮೀಕರಣದಿಂದ ಸ್ಪಷ್ಟವಾಗುವಒಂದಂಶವೆಂದರೆ ಕನ್ನಡ ಹಸ್ತಪ್ರತಿ ವಿಷಯ ಸ್ವರೂಪ ತನ್ನ ಚರಿತ್ರೆಯದ್ದಕ್ಕೂ ಧಾರ್ಮಿಕ ಸಿದ್ಧಾಂತವನ್ನು ಉಲ್ಬಣಗೊಳಿಸುವ ಜೈನ ನೆಲೆಯಲ್ಲಿಯೇ ಸಾಗಿಬಂದಿದೆ. ವೀರಶೈವ ಮತ್ತು ವೈದಿಕ ಹಸ್ತಪ್ರತಿಗಳನ್ನು ಗಮನಿಸಿದಾಗಲೂಈ ಮಾತು ಸತ್ಯವೆನಿಸುತ್ತದೆ. ಪ್ರಸ್ತುತ ಅಧ್ಯಾಯದಲ್ಲಿ ಸಾಂಪ್ರದಾಯಿಕವಾದ ಜೈನ ಸಿದ್ಧಾಂತಕ್ಕಿಂತ ಭಿನ್ನವಾಗಿ ಮಾನವಶಾಸ್ತ್ರೀಯ ಸಮಾಜಶಾಸ್ತ್ರೀಯ ಧೋರಣೆಗಳ ಮೂಲಕ ಒಟ್ಟು ಕನ್ನಡ ಹಸ್ತಪ್ರತಿ ವಿಷಯಸ್ವರೂಪವನ್ನು ವಿವೇಚಿಸಲಾಗಿದೆ.

ಕನ್ನಡ ಹಸ್ತಪ್ರತಿಗಳ ವಿಷಯ ಸ್ವರೂಪ ಸಂಘರ್ಷಕ್ಕಿಂತ ಹೆಚ್ಚು ಪರಿವರ್ತನೆಯ ಕ್ರಿಯೆಗೆ ಒಳಗಾಗಿದೆ. ಪರಿವರ್ತನೆ ಎಂಬುದು ಸಂಘರ್ಷಕ್ಕಿಂತ ಬೇರೆಯಾದ ಪರಿಕಲ್ಪನೆ. ಸಂಘರ್ಷ ಎಂದರೆ ಪ್ರಬಲವಾದ ಶಕ್ತಿ ಅಸಹಾಯಕ ಶಕ್ತಿಗಳನ್ನುಮೆಟ್ಟಿ ನಿಲ್ಲುವದು. ಪರಿವರ್ತನೆ ಎನ ವದು ಹಳೆಯದನ್ನು ಕಳಚಿಕೊ ದರ ಮೂಲಕ ಹೊಸದಾಗುವ ಕ್ರಿಯೆಯ ಒಂದು ವ್ಯಾಪಾರ ಈ ಅರ್ಥದಲ್ಲಿ ಹಸ್ತಪ್ರತಿಗಳ ರೂಪಸ್ವರೂಪ ಸಂಘರ್ಷಕ್ಕೆ ಒಳಗಾದರೆ; ವಿಷಯ ಸ್ವರೂಪಪರಿವರ್ತನೆಗೆ ಒಳಗಾಗಿ ಆದರೆ ಈ ವ್ಯಾಪಾರ ಕೆಲವೆ ಹಿತಾಸಕ್ತಿಗಳ ಬದ್ಧತೆಯಲ್ಲಿ ನಡೆದಿದ್ದು ಮಹತ್ವದ ಅಂಶ ನಾಕೆಂದರೆ ಜೈನ ಧಾರ್ಮಿಕ ಹಸ್ತಪ್ರತಿಗಳು ತಮ್ಮ ಸುತ್ತ ಕಂದಾಚರಣೆಯ ಮಡುವನ್ನು ಲೌಕಿಕ ಹಸ್ತಪ್ರತಿಗಳು ಉಳಿಗಮಾನ್ಯ ವರ್ಗವನ್ನು ನಿರ್ಮಾಣಮಾಡಿದರೆ, ವೀರಶೈವ ಹಸ್ತಪ್ರತಿಗಳು ಸಮುದಾಯಪರ ಭಕ್ತಿ ಹಾಗೂ ಭಾಗವಹಿಸುವಿಕೆಯ ನೆಪದಲ್ಲಿ ಶುದ್ಧ ಧಾರ್ಮಿಕ ಪಂಥವನ್ನು ನಿರ್ಮಾಣ ಮಾಡಿದವು.ವೈದಿಕ ಹಸ್ತಪ್ರತಿಗಳು ಸ್ವಮತವನ್ನು ವೈಭವೀಕರಿಸುತ್ತಾ ಧ್ರುವೀಕರಣಕ್ಕೆ

ಓಳಗಾದವು. ಇಲ್ಲೆಲ್ಲಾ ವಿಷಯ ಸ್ವರೂಪ ಆಯಾ ಸಂದರ್ಭ ಹಾಗೂಕಾಲಕ್ಕೆತಕ್ಕಂತೆ ಬದಲಾವಣೆಗೊಳ್ಳುತ್ತಾ ಹೋಯಿತು. ಜೈನ ಹಸ್ತಪ್ರತಿಗಳು ಧಾರ್ಮಿಕ ,ಲೌಕಿಕ, ಭವಾವಳಿ, ತೀರ್ಥಕರತ್ವ ಕರ್ಮಸಿದ್ಧಾಂತದಂತ ಆಚರಣೆಗಳಲ್ಲಿ ನೆಲೆಗೊಂಡರೆ, ವೀರಶೈವ ಹಸ್ತಪ್ರತಿಗಳು ಪುರಾಣ, ಶಿವಲೀಲೆ, ಶಿವಭಕ್ತರ ಕಥೆ, ಭಕ್ತಿ, ಷಟಸ್ಥಲ, ಅಷ್ಟಾವರಣದಂತಹ ಜಾತಿನಿಷ್ಠ ಪರಿಕಲ್ಪನೆಗಳನ್ನು ಗಟ್ಟಿಗೊಳಿಸಿದವು. ವೈದಿಕ ಹಸ್ತಪ್ರತಿಗಳಂತೂ ಭಾರತ, ಭಾಗವತ, ರಾಮಾಯಣದಂತಹ ವೈದಿಕತನದಿಂದ ಹೊರಬರಲು ಸಾಧ್ಯವಾಗಲೇ ಇಲ್ಲ. ಈ ಮೂರು ಸಂದರ್ಭಗಳಲ್ಲಿ ನಡೆದಿದ್ದು ಮತ ಪ್ರಚಾರಕ ದೃಷ್ಟಿ .ಆಯಾ ಮತಧರ್ಮದವರ ಏಕಮುಖ ನೆಲೆಯಿಂದ ವಿಷಯ ಸಂದರ್ಭದಲ್ಲಿ ಯಾವೊಂದು ಪರಂಪರೆಯೂಗಟ್ಟಿಗೊಳ್ಳಲಿಲ್ಲ.

ಕವಿರಾಜಮಾರ್ಗ ಪೂರ್ವದ ವಿಷಯ ಸ್ವರೂಪವನ್ನು ಖಚಿತವಾಗಿ ಕಟ್ಟಲಾಗದಿವರುವುದಕ್ಕೆ ಬೇರೆಯಾದ ಕಾರಣಗಳನ್ನು ಶೋಧಿಸಬೇಕಾಗಿದೆ. ಈ ಕಾಲದ ಕವಿಗಳ ಮತ್ತು ಕವಿಗಳು ಬಳಸಿಕೊಂಡ ವಿಷಯ ವಸ್ತುವಿನ ಬಗ್ಗೆ ಬರೆಯುವಾಗ ಅಲಿಖಿತ ದಾಖಲೆಗಳೆ ಮುಖ್ಯವಾಗುವದರಿಂದ ಆ ಕಾಲದ ಹಸ್ತಪ್ರತಿಗಳು ಪ್ರಧಾನ ಆಕರಗಳಾಗುವದಿಲ್ಲ. ಅನೇಕ ಬಾರಿ ಆ ಹೊತ್ತಿನ ವಿಷಯ ಸ್ವರೂಪವನ್ನು ಮೌಖಿಕ ಪರಂಪರೆಯಿಂದಲೇ ಅನುಸರಿಸಿಕೊಂಡು ಬರಲಾಗಿದೆ. ವಿಮಳ, ಉದಯ ,ನಾಗಾರ್ಜುನ ,ಜಯಬಂಧು, ದುರ್ವಿನಿತ ,ಗುಣನಂದಿ, ಕವೀಶ್ವರ ,ಲೋಕಪಾಲ, ಅಸಗ ಮುಂತಾದವರ ಹಸ್ತಪ್ರತಿಗಳು ಏನಾದವು ಎಂಬುದೇ ವಿದ್ವಾಂಸರನ್ನು ಕಾಡುತ್ತಿರುವ ಪ್ರಶ್ನೆ. ಆ ಹೊತ್ತಿನ ಸಾಹಿತ್ಯ ಲಿಪಿಪಾತಳಿಗಿಂತ ಹೆಚ್ಚು ಧ್ವನಿಪಾತಳಿಯ ಮೇಲೆ ಸಾಗಿ ಬಂದಿದೆ. ಜನಪದ ಅಭಿವ್ಯಕ್ತಿ ಈ ಧ್ವನಿಪಾತಳಿಯ ಮೂಲ ಸಾಮಗ್ರಿಯಾಯಿತು.

ಓದಲೆಂದು ಬರೆದ ಸಾಹಿತ್ಯಕ್ಕೊ ಕೇಳಲೆಂದು ಬರೆದ ಸಾಹಿತ್ಯಕ್ಕೊ ಇರುವ ಅಂತರವನ್ನೂ ಇಂಥಲ್ಲಿಯೆ ಗಮನಿಸಬೇಕಾಗುತ್ತದೆ. ಕವಿ ಸುಶಿಕ್ಷಿತ ಓದುಗನ ಅಪೇಕ್ಷೆಯ ಚೌಕಟ್ಟಿನಿಂದ ಮುಕ್ತನಾಗಿ ಅಶಿಕ್ಷಿತ ಶ್ರೋತ್ರವರ್ಗದಲ್ಲಿಸಾಹಿತ್ಯ ರಚಿಸಿದ . "ಕೇಳಲೆಂದು ಹುಟ್ಟಿದ ಈ ಸಾಹಿತ್ಯವನ್ನು ಓದಲುಬಾರದ ಎಲ್ಲರೂ ಕೇಳಿದರೋ ಇಲ್ಲವೋ, ಆದರೆ ಕವಿಗೆ ಸೃಷ್ಟಿ ಕ್ರಿಯೆಯಲ್ಲಿ ಅಂಥವರ ಸಂಭವನೀಯ ಶ್ರೋತ್ರತ್ವದ ಭರವಸೆಯಾದರೂ ಇತ್ತೆಂಬುದು ನಿಜ"(ಯು.ಆರ್ ಅನಂತಮೂರ್ತಿ:೧೯೬೨:೩) ಹೀಗಾಗಿ ಆ ಕಾಲದಲ್ಲಿ ಸಾಹಿತ್ಯ ಬರೀ ಓದುವವರಿಗಾಗಿ ಅಲ್ಲ ಕೇಳುವವರಿಗಾಗಿಯೂ ರಚಿತವಾಯಿತು. ಒಂದು ಜೀವನ ಕ್ರಮದ ನಿರ್ಭಿಡೆಯ ಅಭಿವ್ಯಕ್ತಿಯಾದ ಜಾನಪದ ಸ್ವರೂಪಗಳು ಆ ಹೊತ್ತಿಗಾಗಲೇ ಬೆರಗುಗಣ್ಣಿನ ನೋಟಕ್ಕೆ ಗುರಿಯಾಗಿದ್ದರಿಂದ ಕೇವಲ ಕವಿಗಳನ್ನು ಹೆಸರಿಸಿ ಕೈತೊಳೆಯುವ ಪ್ರಯತ್ನ ನಡೆಯಿತು.

ಚರಿತ್ರೆಯನ್ನು ಕಟ್ಟುವ ಸಂದರ್ಭದಲ್ಲಿ ರಾಜಕೀಯ ಮತ್ತು ಸಾಮಾಜಿಕ ಜೀವನದ ಪುರಾವೆಗಳೆನಿಸಿದ ಶಾಸನಗಳು ಪ್ರಧಾನಆಕರಗಳಾಗಿ ಸಾಹಿತ್ಯಿಕ ಸ್ವರೂಪದ ಹೊತ್ತಿನಲ್ಲಿ ಪೂರಕ ಆಕರಗಳಾದರೂ ರಾಜವಂಶಾವಳಿಯನ್ನು ಬಿಟ್ಟರೆ ಹೆಚ್ಚೇನೂಸಿಗಲಿಲ್ಲ, ಸಾಮ್ರಾಜ್ಯಕ್ಕೆ ವೈಭವದೊಡನೆ ಕವಿಗಳ ಆತಂಕ ಮತ್ತು ತಲ್ಲಣಗಳು ಸೇರಿಕೊಂಡು ಸಾಹಿತ್ಯ ರಾಜಕೀಯ ಪ್ರಾಮುಖ್ಯತೆಯನ್ನು ಪಡೆಯಿತು. "ಹಲ್ಮಿಡಿ ಶಾಸನದ ಕಾಲದ ನಂತರದಿಂದ ಮುಂದಣ ಅವಧಿಯಿಂದ ೮ ನೆಯ ಶತಮಾನದವರೆಗಿನ ಅವಧಿಯಲ್ಲಿ ಕನ್ನಡ ಸಾಹಿತ್ಯದಲ್ಲಿ ತಕ್ಕಷ್ಟು ಕೃಷಿ ನಡೆದಿತ್ತೆಂಬುದು ಮಾತ್ರ ಸತ್ಯ".(ಜಿ.ಎಸ್ .ಶಿವರುದ್ರಪ್ಪ:೧೯೭೫:೩) ಎಂಬಂತ ಔಪಚಾರಿಕ ವ್ಯಾಖ್ಯಾನಗಳನ್ನು ಬಿಟ್ಟರೆ ಕನ್ನಡ ಸಾಹಿತ್ಯ ಚರಿತ್ರೆಯ ಕೃತಿಗಳಲ್ಲಿಕವಿರಾಜಮಾರ್ಗ ಪೂರ್ವದ

ವಿಷಯಸ್ವರೂಪವನ್ನು ಖಚಿತವಾಗಿ ನಿರೂಪಿಸುವ ಸಂಗತಿಗಳು ಇಲ್ಲವೆನ್ನುವಷ್ಟು ಕಡಿಮೆ.ಕವಿರಾಜಮಾರ್ಗ ಹೇಳುವ "ಕಾವೇರಿಯಿಂದ ಗೋದಾವರಿ ವರಮಿರ್ದ ನಾಡದಾ ಕನ್ನಡದೋಳ್ ಭಾವಿಸಿದ ಜನಪದಂ"ಎಂದು ನಿರೂಪಿಸುವ ಕಾವೇರಿ,ಗೋದಾವರಿ, ಕಿಸುವೊಳಲ್ , ಕೊಪಣನಗರ ,ಪುಲಿಗೆರೆ ಮತ್ತು ಒಕ್ಕುಂದ ಮುಂತಾದವುಗಳು ರಾಜಕೀಯ ಪ್ರದೇಶದ ಮೇರೆಗಳಾಗುತ್ತವೆ ಹೊರತು ಸಾಹಿತ್ಯಿಕ ಅಂಶಗಳಾಗುವುದಿಲ್ಲ. ಕಡೆ ಪಕ್ಷಈ ಪ್ರದೇಶಗಳನ್ನು ಸಾಹಿತ್ಯಿಕ ಅಧ್ಯಯನಕ್ಕೆ ಒಳಪಡಿಸಿದರೆ ಅನೇಕ ಒಳನೋಟಗಳು ಪ್ರಕಟವಾಗಬಹುದು. ಸದ್ಯ ಹಲ್ಮಿಡಿ ಶಾಸನದಿಂದ ಕವಿರಾಜಮಾರ್ಗದವರೆಗಿನ ಹಸ್ತಪ್ರತಿ ವಿಷಯ ಸ್ವರೂಪದಲ್ಲಿ ಅಧ್ಯಯನ ನಡೆದರೆ ಅನೇಕ ಹೊಸ ವಿಷಯಗಳು ಬೆಳಕಿಗೆ ಬರುವುದರ ಮೂಲಕ ಹೊಸ ಚರಿತ್ರೆಯೊಂದರ ಕಟ್ಟುವಿಕೆ ಸಾಧ್ಯವಾಗುತ್ತದೆ.ಕವಿರಾಜಮಾರ್ಗದನಂತರ ಕೇವಲ ಒಂದು ನೂರು ವರ್ಷದೊಳಗಿನ ಅವಧಿಯಲ್ಲಿ ಪಂಪನ ಎರಡು ಕೃತಿಗಳು ನಿರ್ಮಾಣವಾದವು. ಇಲ್ಲಿಂದಲೇ ಮುಂದೆ ಜೈನರು ಮಹಾಪರಂಪರೆಯೊಂದರ ನಿರ್ಮಾಪಕರಾದರು. ಜೈನರ ಸಾಹಿತ್ಯ ರಚನೆಗೆ ವಿಪುಲವಾದ ರಾಜಕೀಯ ಬೆಂಬಲವಿದ್ದುದರಿಂದ ಜೈನ ಸಂಸ್ಕೃತಿಯನ್ನೆ ಕರ್ನಾಟಕ ಸಂಸ್ಕೃತಿ ಎಂದು ವ್ಯಾಖ್ಯಾನಿಸುವ ಸಂಪ್ರದಾಯ ಬೆಳೆದು ಬಂತು. ಹೀಗೆ ಒಂದೊಂದು ಕಾಲವಸ್ಥೆಯಲ್ಲಿ ಒಂದೊಂದು ವರ್ಗ ಸಮುದಾಯ ಬಲಗೊಂಡಂತೆಲ್ಲ ಅದರ ಪರಿಭಾಷೆಯಲ್ಲೆ ಕರ್ನಾಟಕ ಸಂಸ್ಕೃತಿಯನ್ನು ವ್ಯಾಖ್ಯಾನಿಸುವ ಪ್ರಯತ್ನಗಳು ನಡೆದವು. ಒಂದು ಕಾಲಕ್ಕೆ ಪ್ರಬಲ ಸಂಘಟನೆಯಾದ ಶರಣ ಚಳುವಳಿ ಕೂಡಾ ಕರ್ನಾಟಕ ಸಂಸ್ಕೃತಿ ತಮ್ಮದೆಂಬ ಸ್ವಆರ್ಜಿತ ನೆಲೆಯಲ್ಲಿ ನಂಬಿಸುತ್ತಾ ಬಂದ ಕಾರಣಕ್ಕಾಗಿ ಈಗಲು ಕೂಡಾ ಆ ಬಗೆಯ ವಿವಾದ ವಾಗ್ವಾದಗಳು ಕರ್ನಾಟಕದ ಪರಿಸರದಲ್ಲಿ ನಡೆಯುತ್ತಿರುವುದನ್ನು ಗಮನಿಸಬಹುದು.

ಜೈನ ಪರಂಪರೆ:

ಮತ್ತೆ ಜೈನ ಪರಂಪರೆಯನ್ನು ಕುರಿತು ವಿವೇಚಿಸುವುದಾದರೆ ರತ್ನತ್ರಯರೆನಿಸಿದ ಪಂಪ,ಪೊನ್ನ,ರನ್ನ, ಮೂವರು ಒಂದು ಲೌಕಿಕ ಮತ್ತೊಂದು ಆಗಮಿಕ ಕಾವ್ಯ ರಚಿಸುವುದರ ಮೂಲಕ ಪಂಪನ ಮಾರ್ಗವನ್ನು ಅನುಸರಿಸಿ ಧೋರಣೆಯ ವಿಷಯದಲ್ಲಿ ಏಕಸೂತ್ರತೆಯನ್ನು ಪ್ರಕಟಿಸಿದರು. ಕಾವ್ಯವಸ್ತುವನ್ನು ರಾಜನಿಗೆ ತಗುಳ್ಚಿ ಹೇಳುವ ಸಂದರ್ಭದಲ್ಲಿ ಪ್ರಭುನಿಷ್ಠ ನಿಲುವನ್ನು ಸ್ವಧರ್ಮವನ್ನು ಪ್ರಚಾರಗೊಳಿಸುವಾಗ ಧರ್ಮನಿಷ್ಠ ನಿಲುವನ್ನು ಮೆರೆದರು.

ಧರ್ಮನಿಷ್ಠ ನಿಲುವು:

ಕ್ರಿ.ಶ. ೧೧-೧೨ನೆಯ ಶತಮಾನದವರೆಗೂ ಧರ್ಮ ಮತ್ತು ಪ್ರಭುನಿಷ್ಠ ನಿಲುವುಗಳು ಜೈನ ಹಸ್ತಪ್ರತಿಗಳ ನಿರ್ಮಾಣಕ್ಕೆಅಗತ್ಯವಾದ ಮತ್ತು ಅನಿವಾರ್ಯವಾದ ಕಾರಣಗಳಾಗಿದ್ದವು. ಈ ಎರಡೂ ನಿಲುವುಗಳು ಶ್ರೀ ಸಾಮಾನ್ಯನ ಬದುಕಿನ ಕಡೆಗೆ ವಿಶೇಷ ಗಮನ ಕೊಡಲಿಲ್ಲ. 'ಪ್ರಭುನಿಷ್ಠ' ಪರಂಪರೆ ರಾಜ ಮಹಾರಾಜರ ವಿಲಾಸ ವೈಭವಗಳ ಕಡೆಗೆ ತನ್ನ ಗಮನ ಕೇಂದ್ರೀಕರಿಸಿದರೆ, ಇದರ ಜೊತೆಗೆ ಧರ್ಮನಿಷ್ಠ ಪರಂಪರೆಯೂ ಸೇರಿ ಸಮಾಜದ ಮೇಲಿನವರ್ಗದ ವಿಲಾಸ ವೈಭವಗಳನ್ನೇ ಅತ್ಯಂತ ಪ್ರಬಲವಾಗಿಸುತ್ತ ಹೋಯಿತು. ತಪಸ್ಸು ಮತ್ತು ಪರಮ ವೈರಾಗ್ಯದ ಹಂತದಲ್ಲಿ ಸ್ಫೋಟಗೊಳ್ಳುವ ಬದುಕಿನ ಸುಖ ಸಂತೋಷಗಳಾಗಲಿ, ರೂಪ,

ಧನ, ವೈಭವಗಳಾಗಲಿ ನಶ್ವರವಾದ ಕಾರಣ ತಪಸ್ಸು ಉಪವಾಸಾದಿಗಳಿಂದ ಮೋಕ್ಷ ಅಥವಾ ತೀರ್ಥಂಕರತ್ವವೊಂದೆ ಪರಮಸತ್ಯವೆಂದು ಉದ್ಘೋಷಿಸಲಾಯಿತು. ಇದು ಜೀವನವನ್ನು ಬಹುಮಟ್ಟಿಗೆ ನಿರಾಕರಿಸುವ ಒಂದು ಪ್ರಧಾನ ನಿಲುವಾಯಿತು. ಈ ಸಂದರ್ಭದಲ್ಲಿ ವ್ಯಕ್ತಿ ಪಾಪ ಕರ್ಮಾದಿಗಳಿಂದ ಭವಾವಳಿಗಳನ್ನು ದಾಟಿ ಪಂಚಕಲ್ಯಾಣಗಳನ್ನು ಅನುಭವಿಸಿ ನಿರ್ವಾಣ ಹೊಂದುವ ಪರಿಕಲ್ಪನೆಯಿಂದ ಜೈನರು ತಮ್ಮ ಹಸ್ತಪ್ರತಿಗಳಿಗೆ ಅಹಿಂಸೆ, ಕಠಿಣತಪಸ್ಸು, ಭವಾವಳಿ, ತೀರ್ಥಂಕರ ಚರಿತ್ರೆಗಳಂತಹ ಪರಿಕರಗಳನ್ನು ವಿಷಯವನ್ನಾಗಿ ಸ್ವೀಕರಿಸಿಕೊಂಡರು. ಜೈನತತ್ವವನ್ನು ವಿವರಿಸುವ ನಂದಿಮುನಿಯ 'ಉದ್ಘೋಗಸಾರ'೧ ಮತ್ತು ಮಂಗರಸನ 'ನೇಮಿಜಿನೇಶಸಂಗತಿ'೨ ಯಂತ ಹಸ್ತಪ್ರತಿಗಳು ಮೇಲಿನ ದೃಷ್ಟಿಯಿಂದ ಗಮನಾರ್ಹವಾಗಿವೆ. ಈ ಹಸ್ತಪ್ರತಿಗಳಲ್ಲಿ ಬರುವ ಸಮಸ್ತ ಸುಖ ಸಂತೋಷ ಭೋಗ-ಭಾಗ್ಯಗಳನ್ನನುಭವಿಸಿ ಇರುವಷ್ಟು ಕಾಲ ಹಾಯಾಗಿದ್ದು ಕೊನೆಗೆ ಜೀವನದ ನಶ್ವರತೆಯಿಂದ ಮೋಕ್ಷಕ್ಕೆ ಹೋಗುವದೇ ಪರಮ ಮೌಲ್ಯವೆಂಬುದು ಎಷ್ಟು ಪ್ರಸ್ತುತ? ಜೀವನದ ಎಲ್ಲಸುಖ ಸೌಭಾಗ್ಯಗಳನ್ನು ಅನುಭವಿಸಿ ಆಯುಷ್ಯ ತೀರಿದ ಬಳಿಕ ಎಲ್ಲ ನಶ್ವರವೆಂಬ ಹೇಳಿಕೆಗಳು ಎಷ್ಟು ಸರಿ? ಜೈನ ಹಸ್ತಪ್ರತಿಗಳ ವಿಷಯ ಸ್ವರೂಪವನ್ನು ವಿವರಿಸುವಾಗ ಎದುರಾಗುವ ಇಂಥ ಪ್ರಶ್ನೆಗಳಿಗೆ ಮತ್ತು ಈ ಕೆಳವರ್ಗದ ನಿಜವಾದ ವಾಸ್ತವಗಳೇನು? ಎಂಬುದಕ್ಕೆ ಯಾರು ಉತ್ತರ ಹೇಳಬೇಕು. "ಕನ್ನಡದ ಪ್ರಾಚೀನ ಸಾಹಿತ್ಯದಲ್ಲಂತೂ ಈ ತರದ ಒಂದೆರಡು ಮೇಲ್ವರ್ಗಗಳನ್ನು ಹೊರತು ಪಡಿಸಿದರೆ ಕೆಳವರ್ಗದ ಬದುಕಿನ ಆಸೆ-ಆಕಾಂಕ್ಷೆ, ನೋವು ,ನಲಿವುಗಳತ್ತ ಅಷ್ಟಾಗಿ ಗಮನವಿದ್ದಂತೆ ಕಾಣುವುದಿಲ್ಲ" (ಜಿ.ಎಸ್.ಶಿವರುದ್ರಪ್ಪ; ೧೯೯೫:೩೬) ಪ್ರಾಚೀನ ಸಾಹಿತ್ಯದಲ್ಲಿ ಮಾತ್ರವಲ್ಲ ಆಧುನಿಕ ಕನ್ನಡ ಸಾಹಿತ್ಯದಲ್ಲಿಯೂ ಈ ಬಗೆಯ ವಾಗ್ವಾದಗಳು ಪ್ರಕಟವಾಗಿವೆ.

ಕನ್ನಡ ಜೈನ ಹಸ್ತಪ್ರತಿಗಳಿಗೆ ವಿಷಯಸ್ವರೂಪ ಸ್ವತಂತ್ರವಾಗಿ ಸಿಕ್ಕಿದ್ದಲ್ಲ. ಅದು ಅನ್ಯಭಾಷೆಯೊಂದರಿಂದ ಎರವಲು ಪಡೆಯಿತು. ಸಂಸ್ಕೃತದಲ್ಲಿ ಜಿನಸೇನಾಚಾರ್ಯರ ಪೂರ್ವಪುರಾಣದಂತಹ ಸಿದ್ಧ ಮಾದರಿಗಳು ಕನ್ನಡದ ಜೈನರಿಗೆ ಅನುಸರಣೀಯವಾದವು. ಆದರೆ ಪಂಪ,ಪೊನ್ನ, ರನ್ನ, ಜನ್ನ ಮುಂತಾದ ಜೈನ ಕವಿಗಳು ಸಂಸ್ಕೃತದಲ್ಲಿರುವದನ್ನೆಲ್ಲಾ ನೇರವಾಗಿತರದೆ ಕನ್ನಡ ಪ್ರಾದೇಶಿಕ ಸಂಸ್ಕೃತಿ ಹಾಗೂ ಉಪರಾಷ್ಟ್ರೀಯ ಕಲ್ಪನೆಯೊಂದಿಗೆ ಕಾವ್ಯ ನಿರ್ಮಿಸಿದರು. ಹಾಗೆಯೇ ಕುಮಾರವ್ಯಾಸನಂತ ಕವಿಗಳು ತನ್ನ ಭಾರತದಲ್ಲಿ ಚಿತ್ರಿಸುವ ಹೆಂಗಳೆಯರು ಗದುಗಿನ ಪರಿಸರದ ಹೆಂಗಸರೆ ಆಗಿರಬಹುದು.

ತೀರ್ಥಂಕರರ ಮತ್ತು ಚಕ್ರವರ್ತಿಗಳ ಜೊತೆಗೆ ಮಹಾಪುರುಷರ ಚರಿತೆಗಳನ್ನು ಸೇರಿಸಿ ಹೇಳುವ ಕಾವ್ಯವಸ್ತುಗಳು ಆಗಮಿಕ ಅಥವಾ ಧಾರ್ಮಿಕ ಕಾವ್ಯಪರಂಪರೆಯನ್ನು ಹೆಚ್ಚಿಸಿದವು. ಈ ಕಾರಣದಿಂದ ಜೈನ ಸಾಹಿತ್ಯ ಸಂಪ್ರದಾಯ ಮತೀಯ ಪ್ರಭಾವ ಪ್ರಾಬಲ್ಯದಿಂದಲೇ ಪ್ರಧಾನವಾಗಿ ರೂಪಗೊಂಡಿತು. ಜೈನ ಧರ್ಮದ ಆಚಾರ ಸೂತ್ರಗಳಾದ ಅಹಿಂಸೆ,ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ, ಮೊದಲಾದ ವ್ರತ ನಿಯಮ ನೀತಿಗಳನ್ನು: ವಿಚಾರ ಸೂತ್ರಗಳಾದ ಕರ್ಮ-ಸಿದ್ಧಾಂತಗಳನ್ನು ಲೋಕಪ್ರಿಯ ಕಥೆಗಳ ಮೂಲಕ ಹೇಳುತ್ತಾ ಜನಸಮೂಹದಲ್ಲಿ ಧಾರ್ಮಿಕ ಭಾವನೆಗಳನ್ನು ಜಾಗೃತಗೊಳಿಸಿದರು. ನಾಗಚಂದ್ರನ 'ಜಿನಮುನಿತನಯಶತಕ'೩, ದೊಡ್ಡಯ್ಯ ಕವಿಯ 'ಚಂದ್ರನಾಥಚರಿತೆ'೪ ಯಂತಹಸ್ತಪ್ರತಿಗಳು ಇಂಥ ಜಾಗೃತಿಯನ್ನುಂಟು ಮಾಡಿದವು. ತೀರ್ಥಂಕರರ ಅನೇಕ ಬಗೆಯ ಜೀವನ

ಘಟನೆಗಳನ್ನು ಆಧರಿಸಿಕಥೆ, ಉಪಕಥೆಗಳನ್ನು,ಪುರಾಣ, ಪ್ರೇಮಕಥೆ, ಚೋರರ ಕಥೆ, ಸ್ತ್ರೀಕಥೆ, ದಂತಕಥೆ, ಮೊದಲಾದ ಎಲ್ಲ ರೀತಿಯ ಕಥೆಗಳನ್ನು ತಮ್ಮ ಧಾರ್ಮಿಕ ಉದ್ದೇಶಕ್ಕಾಗಿ ಬಳಸಿಕೊಂಡರು. ಪಾಪ ಪುಣ್ಯಗಳ ಕಲ್ಪನೆಯಲ್ಲಿ ನರಕದ ಭಯ,ಸ್ವರ್ಗದ ಅಭಯ ಅಹಿಂಸೆಯ ಕರಾಳಚಿತ್ರಣ, ಉಪವಾಸದ ಹಿಂಸೆಯನ್ನು ತಿಳಿಸುವ ಭವಾವಳಿಗಳು ಜೈನ ಕಾವ್ಯಗಳಲ್ಲಿಒಂದು ವಿಶಿಷ್ಟ ತಂತ್ರವೆ ಆಗಿ ಪರಿಣಮಿಸಿದವು.

ಪಂಪನ ಆದಿಪುರಾಣದಿಂದ ಮೊದಲ್ಗೊಂಡು ಮುಂದೆ ಬಂದ ಆಗಮಿಕ ಕಾವ್ಯಗಳು ಒಂದಿಲ್ಲೊಂದು ದೃಷ್ಟಿಯಿಂದಜಿನಾಗಮದ ಉತ್ಕರ್ಷವನ್ನು ಕುರಿತು ಹೇಳುವ ಕಾವ್ಯಗಳಾಗಿವೆ. ಪೊನ್ನನ ಶಾಂತಿಪುರಾಣ ೧೬ನೆಯ ತೀರ್ಥಂಕರನಾದ ಶಾಂತಿನಾಥನ ಜೀವನದ ವಿಕಾಸ ಕ್ರಮವನ್ನು ಹೇಳುತ್ತದೆ. ಈ ಕಥೆ ಜನ್ಮಾಂತರಗಳಲ್ಲಿ ಸಾಗುವಂಥದ್ದು. ಕಥೆಯ ಪ್ರಾರಂಭಅಪರಾಜಿತ ಮತ್ತು ಅನಂತವೀರ್ಯರ ಜನ್ಮದಿಂದ ಆಗುತ್ತದೆ. "ಈ ಜನ್ಮದಿಂದ ಅದು ಹಿಂದಕ್ಕೂ ಮುಂದಕ್ಕೂಹೋಗಿ ಭವಾವಳಿಯ ಪ್ರಭಾವಲಯವನ್ನು ಶಾಂತಿನಾಥನ ವ್ಯಕ್ತಿತ್ವಕ್ಕೆ ನಿರ್ಮಿಸುತ್ತದೆ." (ಕೀರ್ತಿನಾಥ ಕುರ್ತುಕೋಟಿ:೧೯೮೫:೩೮) ರನ್ನನ ಧರ್ಮಶ್ರದ್ಧೆ ಪಂಪನಿಗಿಂತ ಕಡಿಮೆಯದಲ್ಲ. ಇದರ ಪ್ರಭಾವದಿಂದಲೆ ರನ್ನನ ಪಾತ್ರಗಳು ಪಂಪನ ಕಾವ್ಯಗಳಿಂದ ಮರುಹುಟ್ಟನ್ನು ಪಡೆದುಕೊಂಡು ಒಂದು ಕಲಾತ್ಮಕವಾದ ಭವಾವಳಿಯನ್ನು ನಿರ್ಮಿಸುತ್ತವೆ. ಜನ್ನನಎರಡೂ ಕಾವ್ಯಗಳೂ ಜಿನಧರ್ಮದ ಆಚರಣೆಯನ್ನು ತಿಳಿಸುವ ಕೃತಿಗಳು. ಆತನ ಅನಂತನಾಥ ಪುರಾಣಕ್ಕಿಂತ ಯಶೋಧರ ಚರಿತೆ ಹೆಚ್ಚು ಜನಪ್ರಿಯವೂ ಆಕರ್ಷಕವೂ ಆಗಿದೆ. ಯಶೋಧರ ಚರಿತೆಯ ಕಥೆ ಕೊನೆಯಿಂದಆರಂಭವಾಗುತ್ತದೆ. ಅಭಯಮತಿ ಮತ್ತು ಅಭಯರುಚಿಕುಮಾರರ ಮೋಹನಾಕಾರದಿಂದಲೇ ಜನ್ನ ತನ್ನ ಕಥೆಯನ್ನುರಚಿಸುತ್ತಾನೆ. ಇದರಿಂದಾಗಿಯೇ ಅವರಿಗೆ ಒಳಗಿನ ವ್ಯಕ್ತಿಗತ ವಿಕಾರಗಳನ್ನು ಪ್ರತಿಭಟಿಸಿ ಆತ್ಮಕಲ್ಯಾಣ ಮಾಡಿಕೊಳ್ಳುವುದು ಮುಖ್ಯವಾಯಿತೇ ವಿನಃ ಹೊರಗಿನ ಸಾಮಾಜಿಕ ಅನ್ಯಾಯಗಳನ್ನು ಪ್ರತಿಭಟಿಸಿ ಸಮಾಜ ಕಲ್ಯಾಣವನ್ನು ಸಾಧಿಸುವುದು ಮುಖ್ಯವೆನಿಸಲಿಲ್ಲ. ಇದೇ ಬಗೆಯ ವಸ್ತುವಿನ್ಯಾಸದಲ್ಲಿ ಮುಂದೆ ಕ್ರಿ.ಶ. ೧೬೦೦ರಲ್ಲಿ ಭಾಮಿನಿಷಟ್ಪದಿಯಲ್ಲಿ ಪದ್ಮನಾಭ ಕವಿಯಿಂದ 'ಯಶೋಧರ ಚರಿತ್ರೆ'೫ ಯೂ ಮತ್ತು ಚಂದ್ರಸಾಗರವರ್ಣಿಯಿಂದಯೊಶೋಧರ ಷಟ್ಪದಿ'೬ ಹಸ್ತಪ್ರತಿಗಳು ರೂಪಗೊಂಡವು.

"ಇಷ್ಟಾಗಿಯೂ ನಮ್ಮ ಸಾಹಿತ್ಯಾಧ್ಯಯನ ಆರ್ . ನರಸಿಂಹಚಾರ್ ಕಾಲದ್ದಾಗಿರುವುದರಿಂದ ಜೈನ ಕವಿ ಎಂದರೆ ಭವಾವಳಿ ತೀರ್ಥಂಕರ ಚರಿತ್ರೆಯನ್ನು ಸಿದ್ಧಪಡಿಸಿಕೊಂಡದ್ದರಿಂದ ಸೃಜನಶೀಲ ಮನಸ್ಸಿನ ಹಿನ್ನೆಲೆಗಳನ್ನು ನಾವು ಮರೆತುಬಿಟ್ಟಿದೇವೆ" (ಆರ್ . ರಾಜಪ್ಪ ದಳವಾಯಿ;೧೯೯೩;೬೮) ಇನ್ನಾದರೂ ಈ ಬಗೆಯ ಸಿದ್ಧ ನೆಲೆಯಿಂದ ಹೊರಬಂದು ಹೊಸ ದೃಷಿಕೋನದಿಂದ ಅಧ್ಯಯನ ಮಾಡಬೇಕಾಗಿವೆ.

ಪ್ರಭುನಿಷ್ಠ ನಿಲುವು:

ತನಗೆ ಆಶ್ರಯ ನೀಡಿದ ಪ್ರಭುಗಳನ್ನು ವೈದಿಕ ಸಂಪ್ರದಾಯದ ಪುರೋಹಿತ ಶಾಹಿಗಳಿಗೆ ಹೋಲಿಸುವುದರ ಮೂಲಕಮತ್ತೆ ರಾಜ್ಯಶಾಹಿ ವ್ಯವಸ್ಥೆಯನ್ನು ಕಾಪಾಡಿಕೊಳ್ಳುವ ಪರಂಪರೆ ಜೈನರಿಂದಲೇ ಪ್ರಾರಂಭವಾಯಿತು. ಜೈನರ ಲೌಕಿಕವಿಷಯದಲ್ಲಿ ಈ ಪರಂಪರೆ ಸ್ಪಷ್ಟವಾಗಿ ನೆಲೆಗೊಂಡಿದೆ. ಧರ್ಮನಿಷ್ಠೆ ಪರಿಸರದಲ್ಲಿ ಸ್ವತಂತ್ರ

ಪ್ರತಿಭಾಶಕ್ತಿ ಹಾಗೂ ಬದುಕಿನಮೌಲ್ಯಗಳ ಪಕ್ಷಪಾತವನ್ನು ಧಾರ್ಮಿಕ ಕೃತಿಗಳಲ್ಲಿ ಅಭಿವ್ಯಕ್ತಿಸಲು ಸದಾವಕಾಶಗಳಿದ್ದ ಕಾರಣವಾಗಿ ಲೌಕಿಕ ಕೃತಿಗಳನ್ನು ರಚಿಸಿರುವ ಸಾಧ್ಯತೆಗಳಿವೆ. ಈ ಹಿನ್ನೆಲೆಯಲ್ಲಿ ಪಂಪ,ರನ್ನ, ಮುಂತಾದವರು ತಮ್ಮ ಲೌಕಿಕ ಕೃತಿಗಳ ಮೂಲಕ ಎತ್ತುವ ಪ್ರಶ್ನೆಗಳು ಕಟ್ಟಿಕೊಡುವ ಮೌಲ್ಯಗಳು ಯಾವುದೇ ಸಾಹಿತ್ಯ ಸಂದರ್ಭಕ್ಕೂಅಮೂಲ್ಯವಾದವುಗಳೇ.

ಜೈನರ ಲೌಕಿಕ ಕಾವ್ಯ ಪರಂಪರೆ 'ಧರ್ಮನಿಷ್ಠ' ನಿಲುವಿಗಿಂತ ಭಿನ್ನವಾಗಿದ್ದು ಧಾರ್ಮಿಕ ಕಾಲ್ಪನಿಕ ಲೋಕಗಳಿಂದದೂರವಾದವು. ಏಕಕಾಲಕ್ಕೆ ಒಬ್ಬರಾಜನ ಇತಿಹಾಸವೂ ಕವಿಯ ಇತಿಹಾಸವೂ ನಿಜವಾಗಿ ತಿಳಿಯುವದರಿಂದ ಆಕಾಲದದೃಷ್ಟಿಯಿಂದಲೂ ಹೆಚ್ಚು ಹತ್ತಿರವಾದವು. ಆದರೆ ಈ ಬಗೆಯ ಲೌಕಿಕ ಕೃತಿಗಳ ಮಿತಿಯೆಂದರೆ ತಮ್ಮ ಸುತ್ತ ಪರಿಮಿತ ಓದುಗ ವರ್ಗವೊಂದನ್ನು ನಿರ್ಮಿಸಿಕೊಂಡು ಸಾಮಾಜಿಕ ಹಾಗೂ ಜನಪರ ನಿಲುವನ್ನು ಸ್ಥಾವರ ನೆಲೆಯಲ್ಲಿಗ್ರಹಿಸಿದ್ದು. 'ಭುವನೈಕ್ಯ ರಾಮಾಭ್ಯುದಯ'.'ವಿಕ್ರಮಾರ್ಜುನ ವಿಜಯ', 'ಸಾಹಸಭೀಮ ವಿಜಯ' ಗಳು ಈ ಬಗೆಯ ಪ್ರತಿಕೂಲ ಇಕ್ಕಟ್ಟಿನಲ್ಲಿ ನಿಂತು ಬರೆದ ಕೃತಿಗಳು. "ಈ ಕಾಲದ ಕವಿಗಳು ವ್ಯವಸ್ಥೆಯೊಂದಿಗೆ ಒಪ್ಪಂದಮಾಡಿಕೊಂಡರು. ಇಂಥವರದು Defencive ವ್ಯಕ್ತಿತ್ವ. ಇವರ ಗುರಿ ತಮ್ಮ ಸ್ಥಾನಮಾನ ರಕ್ಷಣೆಯೆ ಹೊರತು ಸಾಮಾಜಿಕ ಅನಿಷ್ಟಗಳ ನಿವಾರಣೆಗೆ ಕೈಹಾಕಿ ಸಮಸ್ಯೆಗಳನ್ನು ಎದುರಿಸುವುದಾಗಿರಲಿಲ್ಲ." (ಎಂ.ಎಂ.ಕಲಬುರ್ಗಿ:೧೯೮೯;೧೯) ಆದರೆ ಇಂಥ ಸಮಸ್ಯೆಗೆ ಕೈಹಾಕಿ ಬರೆದ ಕವಿಗಳ ಹಸ್ತಪ್ರತಿಗಳು ಲಭ್ಯವಾಗದೇ ಇನ್ನೂ ಚರಿತ್ರೆಯ ಒಳಗಡೆಯೆ ಉಳದಿವೆ.

ಲೌಕಿಕ ಹಸ್ತಪ್ರತಿಗಳನ್ನು ಗಮನಿಸಿದಾಗ ದೊಡ್ಡ ದೊಡ್ಡ ರಾಜರ ಹೋರಾಟ, ಧರ್ಮಗಳ ವಾದ ಪ್ರತಿವಾದಗಳು ತಮ್ಮತಮ್ಮ ಪ್ರಭುತ್ವಕ್ಕಾಗಿ ಪ್ರತಿಗಾಮಿ ಶಕ್ತಿಗಳು ನಡೆಸಿದ ಹೋರಾಟಗಳೇ ಇವೆ ಹೊರತು, ಎಲ್ಲಿಯೂ ಸಾಮಾಜಿಕ ಅನ್ಯಾಯಕ್ಕೆ ಪ್ರತಿಕ್ರಯಿಸಿದ ನಿರಪೇಕ್ಷ ಪ್ರತಿಭಟನೆ ಇಲ್ಲವೆ ಇಲ್ಲ. ವಿಕ್ರಮಾರ್ಜನ ವಿಜಯದಲ್ಲಿ ಮಾದ್ರಿ ಸತಿ ಹೋಗುವ ಪ್ರಸಂಗ, ಕುರಕ್ಷೇತ್ರ ಯುದ್ಧದಲ್ಲಿ ಕೃಷ್ಣನ ಕುಟೀಲ ನೀತಿಯನ್ನು ಪ್ರತಿಭಟಿಸುವ ಮತ್ತು ಪ್ರಶ್ನಿಸುವ ಒಂದೇ ಒಂದುಸಂಗತಿಯೂ ಇಲ್ಲ. ಇಂಥ ಅನಿಷ್ಟಗಳನ್ನು ಮತ್ತೆ ಮತ್ತೆ ಸಾಮಾಜಿಕ ಪರಿಸರದಲ್ಲಿ ಗಟ್ಟಿಗೊಳಿಸುವುದರ ಮೂಲಕ ರಾಜಶಕ್ತಿಗಳು ತಮ್ಮ ತಮ್ಮ ರಾಜಕೀಯ ಪ್ರಭುತ್ವವನ್ನು ಪುರೋಹಿತ ಶಾಹಿಗಳು ತಮ್ಮ ಧಾರ್ಮಿಕ ಪ್ರಭುತ್ವವನ್ನುಸ್ಥಾಪಿಸುವ ಕಾರ್ಯ ಚಟುವಟಿಕೆಗಳು ನಡೆಯುತ್ತಲೆ ಬಂದವು. ಇದರಿಂದ ಒಬ್ಬರಿಗಾಗುತ್ತಿರುವ ಅನ್ಯಾಯವನ್ನು ತಡೆಯಲು ಇನ್ನೊಬ್ಬರು ಯಾವತ್ತು ಮುಂದೆ ಬರಲಿಲ್ಲ. ಭಾರತೀಯ ಬದುಕಿನಲ್ಲಿ ಕೈಯಾಡಿಸುತ್ತ ತನ್ನ ಪ್ರಭುತ್ವಕ್ಕಾಗಿ ಇಡೀ ಸಾಮಾಜಿಕ ಬದುಕನ್ನು ಕೆಟ್ಟವ್ಯವಸ್ಥೆಯಲ್ಲಿ ನಿಯಂತ್ರಿಸುತ್ತ ಬಂದಿರುವ ಮಹಾಭಾರತ ಇಂಥ ಲೌಕಿಕ ಕೃತಿಗಳಲ್ಲಿ ಹೊರನೋಟಕ್ಕೆ ರಾರಾಜಿಸುತ್ತಿದ್ದರೂ ತನ್ನಂತರ್ಯದೊಳಗೆ ಅನೇಕ ವೈರುಧ್ಯಗಳನ್ನು ತುಂಬಿಕೊಂಡು ಎಲ್ಲೊ ಒಂದು ಕಡೆ ವರ್ಣಬೇಧದ ಚೌಕಟ್ಟನ್ನು ಒಡೆಯದೆ ಬಲಗೊಳಿಸುತ್ತ ಬಂದಿದೆ."ಇದರಿಂದ ಜನರ ಹೋರಾಟ ನಿರಂತರವಾಗಿ ನಡೆಯುತ್ತಿದ್ದರೂ ಅದಕ್ಕೆ ಯಾವ ರೀತಿಯ ಗಮನವನ್ನು ರಾಜ ಹಾಗೂ ಧರ್ಮಪೀಠಗಳು ಕೊಡುತ್ತಿರಲಿಲ್ಲ." (ಕಿ..ರಂ.ನಾಗರಾಜ: ೧೯೮೦:೨೧) ಕನ್ನಡದ ಸಂದರ್ಭದಲ್ಲಿ ಪ್ರಭುನಿಷ್ಠೆ ಮತ್ತು ಧರ್ಮನಿಷ್ಠೆಗಳೆರಡನ್ನೂ ನಿರಾಕರಿಸಿ ಹುಟ್ಟಿಕೊಂಡು ಹಸ್ತಪ್ರತಿಗಳಿಲ್ಲ. ಹೀಗೆ ಪ್ರತಿಭಟನೆಯ ನೆಲೆಯಲ್ಲಿ ಹಸ್ತಪ್ರತಿಗಳೇನಾದರೂ ಹುಟ್ಟಿಕೊಂಡಿದ್ದರೆ ಅದು ಒಂದು ಮಹತ್ವದ ಚಾರಿತ್ರಿಕ ಘಟನೆಯೆ ಆಗುತ್ತಿತ್ತೆಂಬುದರಲ್ಲಿ ಸಂದೇಹವಿಲ್ಲ.

**ರಾಮಾಯಣ ಮತ್ತು ಮಹಾಭಾರತ:**

ಜೈನರು ತಮ್ಮ ಹಸ್ತಪ್ರತಿ ವಿಷಯಕ್ಕೆ ಬಳಸಿಕೊಂಡ ಸಂಸ್ಕೃತದ ಸಿದ್ಧಮಾದರಿಯ ರಚನೆಗಳೆಂದರೆ ರಾಮಾಯಣ ಮತ್ತುಮಹಾಭಾರತ ಕನ್ನಡದಲ್ಲಿ ರಾಮಾಯಣವನ್ನು ಕುರಿತು ಕೃತಿ ರಚನೆ ಮಾಡಿದವರು ಜೈನ ಮತ್ತು ವೈದಿಕ ಕವಿಗಳು.ವೀರಶೈವ ಕವಿಗಳಂತೂ ರಾಮಾಯಣ ಮುಟ್ಟಲೆ ಇಲ್ಲ. ಮಹಾಭಾರತ ಜೈನ ಮತ್ತು ಒಟ್ಟಾರೆ ಕನ್ನಡ ಕವಿಗಳ -ಕಾವ್ಯವಸ್ತುವಾಗುವುದರಲ್ಲಿ ರಾಮಾಯಣಕ್ಕಿಂತ ಮಿಗಿಲಾದದ್ದು. ಮಹಾಭಾರತದಷ್ಟು ಹಿಂಸೆ, ಕ್ರೂರ, ಯುದ್ಧ, ದಾಯದಿಕಲಹಗಳಲ್ಲದೆ ನೂರಾರು ಪಾತ್ರಗಳ ವಿಭಿನ್ನ ಮನೋಧರ್ಮ ರಾಮಾಯಣದಲ್ಲಿಲ್ಲವೆಂಬುದೆ ಮುಖ್ಯ ಕಾರಣವಾಗಿರಬಹುದು. ಏಕೆಂದರೆ ಇಲ್ಲಿ ನಡೆದಿದ್ದು ಸೀಮೆಗಳ ವಿಸ್ತರಣೆಗಾಗಿ, ರಾಜ್ಯ ಮತ್ತು ಅರಮನೆಗಳ ಸಂಪತ್ತನ್ನು ಹೆಚ್ಚಿಸಿಕೊಳ್ಳುವನೆಲೆಯಲ್ಲಿ ನಡೆದ ಯುದ್ಧಗಳು, ಪರಸ್ಪರ ಹೋರಾಟಗಳು ಕವಿಗಳ ಮುಖ್ಯ ಮಾಧ್ಯಮಗಳಾದವು. ಆಶ್ರಯನೀಡಿದ ದೊರೆ ಯುದ್ಧದಲ್ಲಿ ತೋರಿರುವ ಸಾಹಸ ಶೌರ್ಯಗಳನ್ನು ಕವಿಕಣ್ಣಾರೆ ಕಂಡು ವರ್ಣಿಸಬೇಕೆಂಬ ನೀತಿ ಆ ಹೊತ್ತಿಗೆ ಬಲವಾಗಿತ್ತು. ಆಶ್ರಯದಾತ ದೊರೆ ಸೋತಾಗಲೂ ಕವಿ ಆತನ ದಿಗ್ವಿಜಯಗಳನ್ನು ವರ್ಣಿಸುವಂತ ಅನೇಕ ಕೃತಿಗಳನ್ನು ಪುನರ್ ಶೋಧಿಸಬೇಕಿದೆ.

ಪಂಪ ರನ್ನರು ಜೈನ ಕವಿಗಳಾಗಿ ಮಹಾಭಾರತವನ್ನು ವಸ್ತುವನ್ನಾಗಿಸಿಕೊಂಡು ಬರೆದರೂ ಅವುಗಳನ್ನು ಜಿನಭಾರತಗಳೆಂದು ಕರೆಯಲಾಗುವದಿಲ್ಲ. ಯಾಕೆಂದರೆ ಅವೆರಡೂ ವ್ಯಾಸಭಾರತವನ್ನು ಕಣ್ಮುಂದೆ ಇರಿಸಿಕೊಂಡುತಮ್ಮದೇ ಆದ ಬದಲಾವಣೆಗಳನ್ನು ಕಥೆಯಲ್ಲಿ ಮಾಡಿಕೊಂಡರೂ ಕಥೆಯ ಮೈಯನ್ನು ಕೆಡಿಸದೆ ವ್ಯಾಸರಿಗೆ ಗೌರವನೀಡುವ ರೀತಿಯಲ್ಲಿ ನಿರೂಪಿತವಾದವು.

ಕಥಾ ಪರಂಪರೆಯನ್ನು ಸೃಜನಶೀಲವಾಗಿ ಮುನ್ನಡೆಸಲು ಪ್ರವಾಹವಾಗಿಯೂ ಆಳುವ ದೊರೆಯನ್ನು ಭಾರತದ ನಾಯಕರೊಂದಿಗೆ ಹೋಲಿಸಿ ಹೇಳುವುದಕ್ಕೆ ಮಾಧ್ಯಮವಾಗಿಯೂ ಮಹಾಭಾರತ ವಿಶಿಷ್ಟ ಮಾದರಿಯ ವಸ್ತುವಾಗಿ ಬಳಕೆಯಾಯಿತು. ಜೈನ ಕವಿಗಳು ತಮ್ಮ ರಾಜ ಋಣವನ್ನು ತೀರಿಸುವುದಕ್ಕಾಗಿ "ನನ್ನ ದೊರೆಯನ್ನು ಯಾರೊಂದಿಗೆ ಹೋಲಿಸಿದರೆ ಸಾಮರ್ಥವಾದೀತೆಂಬ" ಎಣಿಕೆಯಲ್ಲಿರುವಾಗಲೆ ವ್ಯಾಸ ಭಾರತ ತೀರ ಆಕಸ್ಮಿಕವಾಗಿ ಸಿಕ್ಕಾಖನಿಜ ಸಂಪತ್ತಾಯಿತು. ಮುಂದೆ ಇದೇ ಹೊತ್ತಿಗೆ ಜೈನ ಸಂಪ್ರದಾಯದ ರಾಮಾಯಣ ಕಥಾ ಮಾದರಿ ಬೆಳೆಯಿತು. ನಾಗಚಂದ್ರನ 'ರಾಮಚಂದ್ರ ಚರಿತೆ ಪುರಾಣ', ಕುಮದೇಂದುವಿನ ಕುಮದೇಂದು ರಾಮಾಯಣಗಳು ಬೆಳೆದುಬಂದವು.ಮುಂದಿನ ಕವಿಗಳು ಇದೇ ಪರಂಪರೆಯಲ್ಲಿ ಹಸ್ತಪ್ರತಿ ರಚನೆ ಮಾಡಿದರು. ಕ್ರಿ.ಶ. ೧೩ನೆಯ ಶತಮಾದ ಮಿತ್ರದೇವಪ್ಪ ರಾಮನ 'ವಿಜಯ ಕಾವ್ಯ' ೭ ದಂತ ಹಸ್ತಪ್ರತಿಗಳು ಜೈನ ರಾಮಾಯಣ ಪರಂಪರೆಯಲ್ಲಿ ರೂಪಗೊಂಡವು. ಈ ಬಗೆಯಕವಲುಗಳು ಈ ಪರಂಪರೆಯ ನಂತರ ಮುಂದಿನ ವೀರಶೈವ ಯುಗದಲ್ಲಿ ಯಾಕೆ ನಿರ್ಮಾಣವಾಗಲಿಲ್ಲವೆಂಬುದುಕುತೂಹಲದ ಪ್ರಶ್ನೆ.

**ವೀರಶೈವ ಪರಂಪರೆ:**

ಕನ್ನಡ ಸಾಹಿತ್ಯ ಪರಂಪರೆಗೆ ವೀರಶೈವ ಹಸ್ತಪ್ರತಿಗಳ ಕೊಡುಗೆ ಅಪಾರೆನ್ನುವುದಕ್ಕಿಂತ ಅವು ನಿರ್ಮಾಣಮಾಡಿದ ಘಟ್ಟಚಾರಿತ್ರಿಕ ದೃಷ್ಟಿಯಿಂದ ಮಹತ್ವವಾದುದು. ಯಾಕೆಂದರೆ ಈಗಾಗಲೇ ಜೈನರು ಬಳಸಿಕೊಂಡ ವಸ್ತುವಿಗೂ ಮುಂದೆವೀರಶೈವರು ಬಳಸಿಕೊಂಡ ವಸ್ತುವಿಗೂ ತಾತ್ವಿಕ ಭಿನ್ನತೆಯಿದೆ. ಜೈನತ್ವ ಅಥವಾ ತನ್ನ ಹಿಂದಿನ ಒಟ್ಟು ಪರಂಪರೆಯನ್ನು ದಿಕ್ಕರಿಸಿ ಹೆದ್ದಾರಿಯಲ್ಲಿ ಮುನ್ನುಗ್ಗಿದ ವೀರಶೈವ ಹಸ್ತಪ್ರತಿಗಳು ವಸ್ತು ಹಾಗೂ ಅಭಿವ್ಯಕ್ತಿಯಧೋರಣೆಯಲ್ಲಿ ರಾಜಮಾರ್ಗವನ್ನು ನಿರ್ಮಾಣಮಾಡಿದವು.

ಜೈನ ಮತ್ತು ವೀರಶೈವ ಸಾಹಿತ್ಯದ ನಡುವಿನ ಭೇದವನ್ನು ರಾಜಸತ್ತೆ ಮತ್ತು ಧರ್ಮಸತ್ತೆಯ ನೆಲೆಯಲ್ಲಿ ಕಂಡುಕೊಳ್ಳಬೇಕಾಗಿದೆ. ಜೈನ ಸಾಹಿತ್ಯ ರಾಜರನ್ನು ಆಶ್ರಯಿಸಿ ಬೆಳೆದರೆ, ವೀರಶೈವ ಸಾಹಿತ್ಯ ರಾಜರನ್ನು ವಿರೋಧಿಸಿ ಬೆಳೆಯಿತು. ರಾಜಾಶ್ರಯವನ್ನು ತೊರೆದ ಕಾರಣವಾಗಿ ತಮ್ಮ ಕಾವ್ಯವನ್ನು ಅಲ್ಲಿರುವ 'ಪಂಡಿತರು' ಹೊಗಳಬೇಕು ಎಂಬ ಉದ್ದೇಶ ಕವಿ ರಾಘವಾಂಕ ಹೇಳುವಂತೆ ''ಜನ ಬದುಕಬೇಕು'' ಎಂಬ ಉದ್ದೇಶಕ್ಕೆ ಹೊರಳಿತು. ಆದರೆ ಕಾಲಕ್ರಮದಲ್ಲಿ ವೀರಶೈವ ಸಾಹಿತ್ಯ ಜನರ ಹತ್ತಿರ ಹೋಗದೆ ರಾಜಸತ್ತೆ ರಾಜ್ಯಾಧಿಕಾರಗಳಿಂದ ತಪ್ಪಿಸಿಕೊಂಡರೂ ಅದು ಧರ್ಮಸತ್ತೆ ಧರ್ಮಾಧಿಕಾರಿಗಳ ಆಶ್ರಯಕ್ಕೆ ಹೋರಳಿತ್ತು. ಹೀಗೆ ಏಕಕಾಲಕ್ಕೆ ರಾಜತ್ವವನ್ನು ಮತ್ತು ಪಂಡಿತವರ್ಗವನ್ನು ಪ್ರತಿಭಟಿಸಿದ ಈ ಸಾಹಿತ್ಯ ಕಾಲಕ್ರಮೇಣ ಧರ್ಮಾಧತೆಯ ಅಡ್ಡದಾರಿಗೆ ತಿರುಗಿತು. ಈ ಪರಂಪರೆಯಲ್ಲಿ ಪ್ರಭುನಿಷ್ಠ ಬಗೆಗೆ ಹುಟ್ಟಿಕೊಂಡಷ್ಟು ಪ್ರತಿಭಟನೆ ಧರ್ಮನಿಷ್ಠೆಯ ಬಗೆಗೆ ಹುಟ್ಟಿಕೊಳ್ಳಲಿಲ್ಲ. ಆದ್ದರಿಂದಲೇ ಶಿವಶರಣರು ಹಾಗೂ ಅನಂತರದ ದೇಸಿ ಕವಿಗಳು ಪ್ರಭುನಿಷ್ಠೆಯನ್ನು ನಿರಾಕರಿಸಿದರೂ ಅವರು ಧರ್ಮನಿಷ್ಠೆಯನ್ನು ನಿರಾಕರಿಸಲು ಸಾಧ್ಯವಾಗಲೇ ಇಲ್ಲ. ಇಷ್ಟಾದರೂ ವಚನ ಸಾಹಿತ್ಯ ನೇರವಾಗಿ ಧಾರ್ಮಿಕ ನೆಲೆಯ ಸೃಷ್ಟಿಯಂತೆ ಕಂಡರೂ ಕೂಡಾ ಸೂಕ್ಷ್ಮವಾಗಿ ಅದರ ಅಂತರ್ಯದಲ್ಲಿ ಆರ್ಥಿಕ ಮೂಲದ ಸಾಮಾಜಿಕ ರಾಜಕೀಯ ಸಂಗತಿಗಳು ಬಿಚ್ಚಿಕೊಳ್ಳತ್ತಾ ಹೋಗುತ್ತವೆ.

ವೀರಶೈವ ಪರಂಪರೆಯ ಕೃತಿಗಳನ್ನು ಜೈನ ಪರಂಪರೆಯಂತೆ ನಿರ್ಧಿಷ್ಟ ಲಕ್ಷಣಗಳಿಂದ ಗುರುತಿಸುವದು ಕಷ್ಟಸಾಧ್ಯ.ಜೈನರಿಗೆ ಮಾದರಿಯಾಗಿದ್ದು ಲೌಕಿಕ ಮತ್ತು ಆಗಮಿಕ ಹೆಚ್ಚೆಂದರೆ ಪುರಾಣ ಇತ್ಯಾದಿ. ಆದರೆ ವೀರಶೈವರಿಗೆ ನೂರಾರು ಬಗೆಯ ಮನೋಧರ್ಮಗಳು ವಸ್ತುವಾದವು. ಶಿವ ಪುರಾಣದಲ್ಲಿನ ಶಿವನ ಲೀಲೆಗಳೂ, ಶಿವಭಕ್ತರ ಕಥೆಗಳುತಮಿಳುನಾಡಿನ ೬೩ ಪುರಾತಾನರ ಚರಿತೆಗಳು ಮತ್ತು ಬಸವಾದಿ ಪ್ರಮಥರ ಜೀವನಗಳೂ ವೀರಶೈವ ಧಾರ್ಮಿಕ ಸಾಹಿತ್ಯದವಸ್ತುಗಳಾಗಿವೆ. ಹೀಗಾಗಿ ಲೌಕಿಕ ಎನ್ನಬಹುದಾದ ಪ್ರತ್ಯೇಕ ಕಾವ್ಯರೂಪವನ್ನು ಜಾರಿಗೊಳಿಸುವುದು ವೀರಶೈವರ ಧೋರಣೆಯಾಗಿರಲಿಲ್ಲ. ಆದರೆ ಒಬ್ಬ ರಾಜನ ನಿಷ್ಠೆ ಸತ್ಯವನ್ನು ಕುರಿತ 'ಹರಿಶ್ಚಂದ್ರ ಕಾವ್ಯ' ದಂತಹ ಲೌಕಿಕವಿಷಯಗಳ ಕೃತಿಗಳೂ ಧಾರ್ಮಿಕ ಪಟ್ಟಿಯಲ್ಲೆ ಸೇರಿಕೊಳ್ಳುತ್ತವೆ. ಹೀಗೆ ವೀರಶೈವ ಕೃತಿಗಳಲ್ಲಿ ಏಕಕಾಲಕ್ಕೆ ಧಾರ್ಮಿಕವೆನ್ನಬಹುದಾದ ಅಭಿವ್ಯಕ್ತಿಗಳು ಆರ್ಥಿಕ, ಸಾಮಾಜಿಕ, ರಾಜಕೀಯ ಎನ್ನಬಹುದಾದ ಲೌಕಿಕ ಅರ್ಥಗಳು ಅನಾವರಣಗೊಳ್ಳತ್ತ ಹೋಗುತ್ತವೆ.

ವಚನ ಚಳುವಳಿಯಲ್ಲಿ ಯಾಕೆ ಬಿರುಕುಂಟಾದವು ಎಂಬುದು ಈಗ ಹೆಚ್ಚು ಚರ್ಚಿತವಾಗಬೇಕಾದ ವಿಷಯ. ಹೀಗಾಗಲು ಮುಖ್ಯ ಕಾರಣವೆಂದರೆ ಚರಿತ್ರೆಯ ಹಂತದಲ್ಲಿ ವೀರಶೈವರಿಗೆ ಮುಖ್ಯವಾದದ್ದು ನೀತಿ,

ಧರ್ಮ,ಆಧ್ಯಾತ್ಮ. ಲಿಂಗಜಂಗಮ. ಮತೀಯ ನಿಷ್ಠೆಗಳೇ ಹೊರತು ನಿಜವಾದ ಅರ್ಥದ ಸಾಮಾಜಿಕ ಮನುಷ್ಯ ಅಲ್ಲ. ಬಹುಮುಖ್ಯವಾಗಿ ವೀರಶೈವರಿಗೆ ತಮ್ಮ ಸಾಮಾಜಿಕ ಪರಂಪರೆಯನ್ನು ಗಟ್ಟಿಗೊಳಿಸುವುದಾಗಿತ್ತು ಹೊರತು ಸಮಾಜವಾದಿ ಸಿದ್ಧಾಂತವನ್ನು ನಿರ್ಮಿಸುವುದಾಗಿರಲಿಲ್ಲ. ಹರಿಹರಸಂತ ಭಕ್ತ ಕವಿಗಳು ಪ್ರಭುನಿಷ್ಠೆಯನ್ನು ಹಾಗೂ ಆ ನಿಲುವಿನ ಕಾವ್ಯವಸ್ತುಗಳನ್ನು ನಿರಾಕರಿಸಿ ಸಮಾಜದ ಅದರಲ್ಲೂ ಕೆಳಗಿನ ಸಾಮಾಜಿಕ ಹಂತಗಳಿಗೆ ಸೇರಿದ ಸಾಮಾನ್ಯಮನುಷ್ಯರನ್ನು ತನ್ನ ಖಂಡಕಾವ್ಯಗಳ ಕಥಾನಾಯಕರನ್ನಾಗಿ ಮಾಡಿಕೊಂಡರೂ ಅವನದು ಸಮಾಜವಾದಿ ನಿಲುವಿಗಿಂತ ಬೇರೆಯಾದ ಧಾರ್ಮಿಕ ನಿಲುವೇ ಆಗಿತ್ತು. ಸಾಮಾಜಿಕ ಶ್ರೇಣಿಯ ಕೆಳಗಿನ ಹಂತದ ಒಬ್ಬ ಅಗಸ. ಒಬ್ಬ ಕುಂಬಾರ. ಒಬ್ಬ ಬೆಸ್ತ. ಒಬ್ಬ ಒಕ್ಕಲಿಗ. ಒಬ್ಬ ಕೂಲಿಯವ. ಸಾಮಾನ್ಯರ ಜನಪ್ರತಿನಿಧಿಗಳಾಗಿ ಚಿತ್ರಣಗೊಂಡರೆಂದು ಹೆಮ್ಮೆಪಟ್ಟರೂ ಸೂಕ್ಷ್ಮದಲ್ಲಿ ಅವರೆಲ್ಲ ಹರಿಹರನ ಶಿವಭಕ್ತರಾಗಿ ಚಿತ್ರಿತಗೊಂಡರು. ವಚನ ಚಳುವಳಿಯ ನಂತರ ಶರಣ ಸಿದ್ಧಾಂತಕ್ಕೆ ಬದ್ಧವಾಗಿ ಬರೆದವರು ಹರಿಹರ ಮತ್ತು ರಾಘವಾಂಕರು. ಇವರಿಬ್ಬರ ಕೃತಿಗಳಲ್ಲಿ ಶಿವ ಅತ್ಯಂತ ಕೆಳಜಾತಿಗಳ ವೇಷಧರಿಸಿ ಭಕ್ತಿಯ ಪರೀಕ್ಷೆಗೆ ಬರುತ್ತಾನೆ ಹೊರತು ನಿಜವಾಗಿ ಆಯಾ ಜಾತಿಯವನಾಗಿ ಹುಟ್ಟಿಬರುವುದಿಲ್ಲ. ``ಹರಿಹರ ಮತ್ತು ರಾಘವಾಂಕರಲ್ಲಿ ನಡೆಯಿತೆನ್ನಲಾದ ವಾಗ್ವಾದ ವಚನ ಚಳುವಳಿಯೊಳಗೆ ಮರದೊಳಡಗಿದ ಬೆಂಕಿಯಂತೆ ಸುಪ್ತವಾಗಿದ್ದ ಮತೀಯ ಅಂಧ ಶ್ರದ್ಧೆಯನ್ನು ಪ್ರಕಟಿಸುತ್ತದೆ.''(ಚಂದ್ರಕಾಂತ ಒಡ್ಡು;೧೯೯೨:೫೦) ಇದರಿಂದ ಹರಿಹರ,ರಾಘವಾಂಕರು ಎಷ್ಟು ಮನುಷ್ಯರ ಪರವಾಗಿ ಬರೆದರೂಅದು ಧಾರ್ಮಿಕವಾಗಿರುತ್ತದೆ. ಮನುಷ್ಯರ ಚರಿತ್ರೆ ಬರೆದದ್ದಕ್ಕಾಗಿ ಹರಿಹರ ರಾಘವಾಂಕನಿಗೆ ಹೊಡೆದಿದ್ದು ಆತನಸಾಮಾನ್ಯ ಬದುಕಿನ ಪ್ರತಿಗಾಮಿ ಧೋರಣೆಯನ್ನೇ ಪ್ರಕಟಿಸುತ್ತದೆ.

ಇಡೀ ವೀರಶೈವ ಪರಂಪರೆ ಲಿಂಗಧೀಕ್ಷೆಯ ಆಧಾರದ ಮೇಲೆ ನಿಂತಿದೆ. ಈ ಆಚರಣೆ ಎಷ್ಟು ಕ್ರೂರವಾಯಿತೆಂದರೆಲಿಂಗದೀಕ್ಷೆಯಾದವರು ಮಾತ್ರವೇ ಭಕ್ತರು. ಅಜಾತರು. ಲಿಂಗಧೀಕ್ಷೆಯಾಗದವರು ದೇವರಾಗಲಿ. ಬ್ರಾಹ್ಮಣರಾಗಲಿ.ಶೂದ್ರರಾಗಲಿ ಅವರು ನರಕಿಗಳು. ಭವಿಗಳು.ಇಲ್ಲಿ ಮಾನವ ದೇವನಾಗುವದು ಧಾರ್ಮಿಕವಾದರೆ. ದೇವ ಮಾನವನಾಗಿಅವತರಿಸುವದು ಲೌಕಿಕ.ಈ ಬಗೆಯ ವರ್ಗೀಕರಣ ಒಟ್ಟು ಮಾನವ ಬದುಕನ್ನೇ ನಿಸ್ತೇಜಗೊಳಿಸುವ ತಂತ್ರವಾಗುತ್ತದೆ.ಆದರೆ ಇದೇ ಸಮುದಾಯದಲ್ಲಿ ಬಾಲಲೀಲಾ ಮಹಾಂತನಂತವರು ಲಿಂಗ ಧೀಕ್ಷೆಯನ್ನು ವಿರೋಧಿಸಿ ರಚಿಸಿದ ವಚನಗಳೂ ಇವೆ.

ನುಲಿಯ ಚಂದಯ್ಯ ಮತ್ತು ಕೆಳಗೆ ಬಿದ್ದ ಲಿಂಗದ ನಡುವೆ ನಡೆಯುವ ಸಂಭಾಷಣಾ ರೂಪದ ಹೆಂಡದ ಮಾರಯ್ಯನವಚನವೊಂದು ಲಿಂಗ ಧೀಕ್ಷೆಯನ್ನು ಪ್ರತಿಭಟಿಸುವ ನೆಲೆಯಲ್ಲಿ ಹುಟ್ಟಿಕೊಂಡರೂ ಅದು ಲಿಂಗ ಧೀಕ್ಷೆಯನ್ನು ಮತ್ತೆಸ್ಥಿರೀಕರಣಗೊಳಿಸುವ ಪ್ರಕ್ರಿಯೆಯನ್ನು ಗ್ರಹಿಕೆಗೆ ತರುತ್ತದೆ

ಲಿಂಗ: ನುಲಿಯೊಡಯರೇ ನಿಮ್ಮಾಳ್ದನ ಕೊಳ್ಳರೇ?

ಚಂದಯ್ಯ: ಆಳ್ದರೆಂದರಾರು? ಅವರು ನಮ್ಮ ಕೈಯಲ್ಲಿದ್ದಂಥವರು. ಅವರ ಆಳ್ದರಲ್ಲ!

ಲಿಂಗ: ಆದರೇನು? ಇವರು ನಿಮ್ಮ ಇಷ್ಟರುದ್ರರಾಗರೆ

ಚಂದಯ್ಯ: (ನಮ್ಮ ಇಷ್ಟರುದ್ರರು) ಜಂಗಮವಾಗಿದ್ದಿಹರು

ಲಿಂಗ: ಇವರು ಬೇಡವೆ?

ಚಂದಯ್ಯ: ಇಹರೆ ಬೇಡೆನ್ನೆ ಹೋಹರೆ ನಿಲಿಸ ಶಕ್ತನಲ್ಲ.

ಲಿಂಗ: ನಾವು ಇರಲು ಒಲ್ಲಲಲ್ಲಿ?. ಚಂದಯ್ಯ: ಇಂ

ಲಿಂಗ: ಕೈಯಲ್ಲಿ ಕೊಳ್ಳಿರೇ?

ಚಂದಯ್ಯ: ಮುನ್ನವೇ ಕೊಂಡಿದ್ದೇನು?

ಲಿಂಗ: ಎನ್ನನೇಕೆ ಒಲ್ಲೆದಯ್ಯ?

ಚಂದಯ್ಯ: ನೀನು ಮುನಿದಿದ್ದೆಯಾಗಿ

ಲಿಂಗ: ಇನ್ನು ಮುನಿವದಿಲ್ಲ ನಾನು

ಚಂದಯ್ಯ: ನಿಮ್ಮ ನಂಬುವದಿಲ್ಲ

ಲಿಂಗ: ಹೊಣೆಯ ಕೊಟ್ಟಿಹೆನು

ಚಂದಯ್ಯ: ಅವರಾರು?

ಲಿಂಗ: ಮುಂಚಿಟೀವ ಪ್ರಸಾದ ಹೊಣೆಯಾಗ್ಯೆ

ಚಂದಯ್ಯ: ನಂಬೆನು

ಲಿಂಗ: ಬೇಯಾ ನಿಮ್ಮಾಣೆ ಪತ್ರವಾದರೆ ಕೊಟ್ಟಿಹೆನು

ಚಂದಯ್ಯ: 'ಆಗಲಿ'

ಲಿಂಗ: ಇರಲಿಕ್ಕೆ ಠಾವೆಲ್ಲಿ? ಕರದಲ್ಲಿಯೇ?

ಚಂದಯ್ಯ: ಅಲ್ಲ

ಲಿಂಗ: ಉರದಲ್ಲಿಯೇ

ಚಂದಯ್ಯ: ಅಹುದು.

ಲಿಂಗ: ನಂಬಿದೆನು.

ಚಂದಯ್ಯ: ಸುಬದಲ್ಲಿರು ಧರ್ಮೇಶ್ವರ (ಉದ್ಧೃತ: ವಚನಸಾಹಿತ್ಯದಲ್ಲಿ ಕೆಳವರ್ಗದ ಆಶಯ ಮತ್ತು ಅಭಿವ್ಯಕ್ತಿ:)",

ಈ ವಚನದಿಂದ "ಹೆಂಡದ ಮಾರಯ್ಯನಂಥವರು ಲಿಂಗಕ್ಕೆ ನೇತುಬಿದ್ದವರಲ್ಲ. ಆದರೆ ಅದು ತನಗೆ ನೇತುಬಿದ್ದರೆಬೇಡವೆಂದವರು ಅಲ್ಲವೆಂಬುದು ಸ್ಪಷ್ಟವಾಗುತ್ತದೆ" (ಎಲ್ ಬಸವರಾಜು:೧೯೬೩:೧೨) ಕಾಯಕದಲ್ಲಿ ಮೇಲುಕೀಳುಇಲ್ಲವೆಂದ ವಚನಕಾರರು ಲಿಂಗದೀಕ್ಷೆ ಹಾಗೂ ಜಂಗಮವರ್ಗವನ್ನು ಸೃಷ್ಟಿಸಿದರು. ಒಂದು ಸಾಮಾಜಿಕ ಚಳುವಳಿ ಸಂಸ್ಥೆಯಾದಾಗ ಹೀಗಾಗುತ್ತದೆ. ಪ್ರಪಂಚದ ಎಲ್ಲ ಮತಗಳಿಗೂ ಒದಗಿದ ದುಸ್ಥಿತಿ ಇದು. ಈ ವರ್ಗ ಜನತೆಯನ್ನುಶೋಷಿಸಿತು. ಲಿಂಗದೀಕ್ಷೆ ಶೋಷಿತ ವ್ಯವಸ್ಥೆಯ ಒಂದುಭಾಗವಾಗಿ ಸಾಮಾಜಿಕ ಅಸಮಾನತೆಗೆ ಕಾರಣವಾಯಿತು. ಕ್ರಿಶ ೧೮೦೦ರಲ್ಲಿ ರಚಿತವಾದ ನಿಜಲಿಂಗಾರಾಧ್ಯ ಕವಿಯ 'ನಿಜಲಿಂಗ ಶತಕ'ಂ ಮತ್ತು ಕ್ರಿ.ಶ ೧೭೦೦ರಲ್ಲಿ ಪ್ರಕಟವಾದ ಮುರಿಗಾ ಶಾಂತವೀರ ಕವಿಯ 'ಪ್ರಭುಲಿಂಗದ ಕಂದ' ಇವು ಇಷ್ಟಲಿಂಗ ಅಥವಾ ಲಿಂಗದೀಕ್ಷೆಯನ್ನುವಿವರಿಸುವ ಹಸ್ತಪ್ರತಿಗಳಾಗಿವೆ.

“ಮಂತ್ರಿ ಬಸವಣ್ಣನ ಮುಖಂಡತ್ವದಲ್ಲಿ ಆರಂಭವಾದ ವೀರಶೈವ ಧಾರ್ಮಿಕ ಚಳುವಳಿ ಮೊದಮೊದಲು ಅರಮನೆಗುರುಮನೆಗಳನ್ನು ಒಟ್ಟಾಗಿ ವಿರೋಧಿಸಲು ಹೊರಟು ಅದು ಕೊನೆಗೆ ತಲುಪಿದ್ದು ಅರಮನೆ ಗುರುಮನೆಗಳ ನಡುವಿನ ಕಿತ್ತಾಟವಾಗಿ”(ಸಿ ವೀರಣ್ಣ: ೧೯೭೭:೩೦) ಜಂಗಮರನ್ನು ಗೌರವಸ್ಥಾನಕ್ಕೇರಿಸಿ ದುಡಿಯದೆ ಉಣ್ಣುವವರ್ಗವೊಂದನ್ನು ಅದು ಹುಟ್ಟುಹಾಕಿತು. ನೈತಿಕ ಮೌಲ್ಯ ಧಾರ್ಮಿಕ ಆಲೋಚನೆಗಳಿಗೆ ಪರಿಹಾರ ಕಂಡರೆ ಹೊರತುತಾವು ನಿಂತ ನೆಲದಲ್ಲಿ ಹಸಿವು, ಬಡತನ, ಶೋಷಣೆ, ಪುರೋಹಿತಶಾಹಿ ದಬ್ಬಾಳಿಕೆ, ಅಸ್ಪೃಶ್ಯತೆ, ಸಾಮಾಜಿಕಅಸಮಾನತೆಗಳನ್ನು ಮರೆತರು. ಮನುಷ್ಯನ ಕೇಡಿಗೆ, ಪಾಪಕರ್ಮಕ್ಕೆ ಸಂಗನನ್ನು ನೆನೆಯುವದೊಂದೆ ಮದ್ದು“ಎಲವಿಲವೊ ಪಾಪಕರ್ಮವ ಮಾಡಿದವನೆ ಒಮ್ಮೆ ಶರಣೆನ್ನು” ಎನ್ನುತ್ತ ಶರಣೆನ್ನಲು ಪಾಪಕರ್ಮವ ಮಾಡುವ ಧೋರಣೆಯನ್ನು ಒತ್ತಿಹೇಳಿದರು.

ವೀರಶೈವ ಸಂಪ್ರದಾಯದ ಶ್ರೀ ವೀರಭದ್ರ ದೇವರ ವಡುಬುಗಳು ಎಂಬ ಗ್ರಂಥದಲ್ಲಿ ೧೨ನೆಯ ವಡಬನ್ನು ಗಮನಿಸಿದರೆದಾನಧರ್ಮದ ಬಗ್ಗೆ, ಜನಸಾಮಾನ್ಯರ ಬಗ್ಗೆ,ಅತ್ಯಂತ ಕೆಳವರ್ಗದ ಬದುಕಿನ ಬಗ್ಗೆ ವೀರಶೈವರು ತಳೆದಿದ್ದ ಧೋರಣೆವ್ಯಕ್ತವಾಗುತ್ತದೆ.

“ಪೊಡವಿ ಅರಿಯುವಂತೆ ಕಡುಪಾಪಿಗಳಿಗೆ ಪೊಡಮಟ್ಟು ವಡಲಕಿಚ್ಚಿಗೆ ತಿರುಗುವ ಕುರುಡ ಕುಂಟಾ ಇವರಿಗೆಸಡಗರದಿ ಧರ್ಮವ ಮಾಡಿದರೆ ನೀವು ಮುಂದಿನ ಜನ್ಮದಲ್ಲಿ ಕುರುಡರಾಗಿ ಕುಂಟರಾಗಿ ಹುಟ್ಟುವಿರಿ. ಇಂಥವರಿಗೆ ಧರ್ಮ ಮಾಡಿದರೆ ಅವರಿಂದೇನು ನಿಮಗೆ ಮನದಿಂದ ಆಶಿರ್ವಾದ ಮಾಡಲಿಕ್ಕೆ ಶಕ್ತರೇ ಅಲ್ಲಾ ತಮ್ಮಲಿಂಗ ಭಂಗವಾದುದನ್ನು ತಾವು ತಿದ್ದಲರಿಯದೆ ಬುದ್ಧಿ ಜೀವಿಗಳಿಗೆ ಪದ್ಮ ಶರಹನೆಂದು ಪದ್ಮಾಕ್ಷನೆಂದು ಪದ್ಮಧರ್ಮನೆಂದು ತಿಳಿದು ಮಾಡಿದರೆ ಇವರು ತ್ರಿಮೂರ್ತಿಗಳಾಗಲರಿಯರು ಎಂದಾತ ನಮ್ಮ ಚನ್ನವೀರಭದ್ರ” (ಉದ್ಧೃತ:ಕೆ.ಜಿ.ನಾಗರಾಜಪ್ಪ:ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ:೬೧).

ಹೀಗೆ ವೀರಶೈವ ವಸ್ತುಸ್ವರೂಪ ಕನ್ನಡದ್ದಾದರೂ ಅದು ಇಡಿ ಕನ್ನಡದ ಬದುಕನ್ನು ಒಳಗೊಳ್ಳಲಿಲ್ಲ.ಆದರೆ ಕನ್ನಡ ಎಲ್ಲ ಜನಸಮುದಾಯಗಳನ್ನು ಒಳಗೊಂಡಿದೆ. ಮೇಲೆ ನಿರೂಪಿಸುವ ವಡಬಿನ ಆಧಾರದಿಂದ ವೀರಶೈವ ಈ ಎಲ್ಲ ಸಮುದಾಯಗಳನ್ನು ಒಳಗೊಳ್ಳಲಿಲ್ಲವೆಂದು ಸ್ಪಷ್ಟವಾಗುತ್ತದೆ. ಜೈನರನ್ನು ಬಿಟ್ಟರೆ ವೈದಿಕರು ಸಾಮಾಜಿಕ ಸಮಾನತೆ ಹಾಗೂ ಬದುಕಿನ ಸಂಘಟನೆಗಳನ್ನು ಜಾತಿ ಶ್ರೇಣಿಯ ಹಿನ್ನೆಲೆಯಲ್ಲಿ ಕಟ್ಟಿಕೊಂಡು ಬಂದಿದ್ದರೋ ವೀರಶೈವರು ಅದನ್ನೆಮಾಡಿದರು. ಒಂದು ಧರ್ಮಕ್ಕೆ ತತ್ವಕ್ಕೆ ಅತ್ಯಂತ ಕಟ್ಟುನಿಟ್ಟಾಗಿ ಒಪ್ಪಿಕೊಂಡ ವೀರಶೈವರು ತಮ್ಮ ಕೃತಿಗಳಲ್ಲಿತಮ್ಮ ಕಾಲದ ಸಮಾಜದ ಏಳು ಬೀಳುಗಳನ್ನು ಇಡಿಯಾಗಿ ಚಿತ್ರಿಸಲು ಸಮರ್ಥರಾಗಲಿಲ್ಲ.

ವೈದಿಕ ಪರಂಪರೆ:

ನಿಮ್ಮ ಜಾತಿ ನಿಮಗಿರಲಿ, ನಿಮ್ಮ ಸಿರಿತನ ಬಡತನ ನಿಮ್ಮದಾಗಿರಲಿ. ಹರಿಭಕ್ತಿಯ ಆಧಾರದ ಮೇಲೆ ನಾವೆಲ್ಲ ಒಂದಾಗೋಣ ಎನ್ನುವ ನೆಲೆಯಲ್ಲಿ ಹುಟ್ಟಿಕೊಂಡಿದ್ದು ವೈದಿಕ ಪರಂಪರೆ. ವೈದಿಕ ಪರಂಪರೆಯ ಅಧ್ಯಯನವೆಂದರೆಅದು ಮಧ್ಯಕಾಲೀನ ಕರ್ನಾಟಕದ ಪುರೋಹಿತ ವರ್ಗದ ಅಧ್ಯಯನವು ಹೌದು. ಜೈನಧರ್ಮ, ತೀರ್ಥಂಕರ, ಶಿವಶರಣರನ್ನು ದಾಟಿ ಬಂದ ಕನ್ನಡ ಹಸ್ತಪ್ರತಿ ಪರಂಪರೆ ಮಧ್ಯಕಾಲೀನದ

ಹೊತ್ತಿಗೆ ಫ್ಯೂಡಲ್ ನಿಂದಪುರೋಹಿತಶಾಹಿಯ ಕೈಗೆ ಸಿಕ್ಕಿತು. ಮಧ್ಯಕಾಲೀನ ಪೂರ್ವದ ಕರ್ನಾಟಕದಲ್ಲಿ ಫ್ಯೂಡಲ್ ವ್ಯವಸ್ಥೆ ಪ್ರಬಲವಾಗಿದ್ದರೆಆನಂತರ ವೈದಿಕ ಪರಂಪರೆಯ ಹೊತ್ತಿಗೆ ಪುರೋಹಿತಶಾಹಿ ಗಟ್ಟಿಗೊಳ್ಳುತ್ತಾ ಹೋಯಿತು. ಮುಂದೆ ವೈದಿಕ ಪರಂಪರೆ ಪುರೋಹಿತ ವರ್ಗವನ್ನು ಅತ್ಯಂತ ಬಲಿಷ್ಠವಾಗಿ ಪೋಷಿಸುತ್ತ ತನ್ನೊಂದಿಗೆ ಕೈಹಿಡಿದುಕೊಂಡೆ ಬಂತು.

ಬಹುಶಃ ವಿಜಯನಗರದಂತ ಒಂದು ಬೃಹತ್ ರಾಜಕೀಯ ಒತ್ತಡವಿರದಿದ್ದರೆ ಹರಿದಾಸ ಪರಂಪರೆ ಕರ್ನಾಟಕದಲ್ಲಿಯಂತೂ ಸಾಧ್ಯವಿರಲಿಲ್ಲ. ಹೆಚ್ಚೆಂದರೆ ಯಾವುದೋ ಮಂದಿರದೊಳಗೆ ಹರಿಯನ್ನು ಕೊಂಡಾಡುವ ಭಜನಾ ಮಂಡಳಿಯಾಗಿರುತ್ತಿದ್ದರು. ಧರ್ಮ ಎಷ್ಟು ರಾಜತ್ವವನ್ನು ಧೂರಿಕರಿಸುತ್ತಿತ್ತೊ ಅಷ್ಟು ಹತ್ತಿರವಾಗುತ್ತಿತ್ತು. ಹರಿದಾಸರು ಮುಖ್ಯವಾಗಿ ವಿಷ್ಣು ಭಕ್ತರು. ತಮ್ಮ ಕೃತಿ ಕೀರ್ತನೆಗಳ ತುಂಬೆಲ್ಲಾ ವಿಷ್ಣು ಪಾರಮ್ಯವನ್ನು ಕೊಂಡಾಡಿದರು. ಕರ್ನಾಟಕದಲ್ಲಿ ಅವತರಿಸಿ ದ್ವೈತಮತ ಪ್ರತಿಪಾದನೆ ಮತ್ತು ತಾವು ನಂಬಿದ ಧಾರ್ಮಿಕ ಪ್ರಸಾರಕ್ಕಾಗಿಯೇ ಭಾಷೆಯನ್ನು ಬಳಸಿಕೊಂಡವರು. ಹೀಗಾಗಿ ಇವರ ಕೃತಿಗಳಲ್ಲಿ ಧಾರ್ಮಿಕ ಮತ್ತು ಸ್ವಂತ ಸಮಾಜದ ನಿಲುವುಗಳನ್ನು ಬಿಟ್ಟರೆ ಮಾನವ ಸಮುದಾಯದ ನೆಲೆಗಳು ಕಿಂಚಿತ್ತೂ ಇಲ್ಲ. ಮಾನವ ಸಂಬಂಧಗಳನ್ನು ಒಡೆದು ಮಾನವೀಯತೆಗೆ ಗೋರಿ ಕಟ್ಟಿದಂತೆ ಜಾತಿ ಗೋಡೆಗಳನ್ನು ಹುಟ್ಟುಹಾಕಿ ಅಸಮಾನತೆಯನ್ನು ಬೆಳೆಸಿತು. ಪ್ರಗಲ್ಭ ಪಾಂಡಿತ್ಯ, ವಿಶ್ವದ ಪರಿಕಲ್ಪನೆಯ ಲೋಕಾನುಭವಗಳ ಮಟ್ಟಕ್ಕೆ ಮನುಷ್ಯರೆ ಬರಬೇಕೆ ಹೊರತು ಮನುಷ್ಯನ ಮಟ್ಟಕ್ಕೆ ನಾವಿಳಿಯುವದಿಲ್ಲವೆಂಬ ಬದ್ಧ ನಿಲುವು ಹರಿದಾಸರದಾಗಿತ್ತು. ಆದ್ದರಿಂದಲೆ ಮಾನವ ಜನ್ಮ ದೊಡ್ಡದು ಇದ ಹಾನಿ ಮಾಡಲು ಬೇಡಿ ಹುಚ್ಚಪ್ಪಗಳಿರಾ?' ಎಂದ ಹರಿದಾಸರ ಮಾನವ ಜನ್ಮ ಯಾವುದೆಂದು ನಿರಾತಂಕವಾಗಿ ಪ್ರಶ್ನಿಸಬೇಕಾಗುತ್ತದೆ. ಇಂಥ ಕೀರ್ತನೆಗಳ ಮೂಲಕ ಮನುಷ್ಯ ಜನ್ಮದ ಹೊರಗಿನ ಪೊದರನ್ನು ಸರಿಸುವ ಪ್ರಯತ್ನ ಮಾಡಿದರೆ ಹೊರತು, ಒಳಗಿನ ರಕ್ತ ಮಾಂಸಗಳಿಗಾದ ಅನ್ಯಾಯ, ಶೋಷಣೆ, ಜಾತಿ ಭ್ರಷ್ಟತೆಯನ್ನು ನಿವಾರಿಸುವ ಗೋಜಿಗೆ ಹೋಗಲಿಲ್ಲ. ತಾವು ತಮ್ಮ ಮತ ಪಂಥಗಳ, ಜಾತಿ ಧರ್ಮಗಳ, ವಿನ್ಯಾಸದೊಳಗಿದ್ದುಕೊಂಡೆ 'ಕುಲಕುಲವೆಂದು ಕಚ್ಚಾಡದಿರಿ' ಎನ್ನುವ ತೀರಾ ವಿರೋಧಾಭಾಸದ ಬದುಕನ್ನು ಬಾಳಿದರು. 'ನಾವು ಮಾತ್ರ ನಮ್ಮ ವೈದಿಕತನವನ್ನು ಕಟ್ಟಿಕೊಂಡೆ ಸಾಯುತ್ತೇವೆ ವಿನಃ ಜಾತಿ ಧರ್ಮಗಳ ಅಸಮಾನತೆಯನ್ನು ನಿರಾಕರಿಸುವುದಿಲ್ಲ.' ಎನ್ನುತ್ತ ಸಾಮಾಜಿಕ ಶ್ರೇಣೀಕೃತ ವ್ಯವಸ್ಥೆಯನ್ನು ಅದರ ಮೂಲ ಸ್ವರೂಪದಲ್ಲೆ ರಕ್ಷಿಸುತ್ತಾ ಬಂದರು.

ಹರಿದಾಸರು ಪ್ರಾಚೀನ ಭಾಗವತ ಪರಂಪರೆಯೊಂದಿಗೆ ತಮ್ಮ ಮಧ್ವ ಮತ ತತ್ವಗಳನ್ನು ಭದ್ರವಾದ ತಳಹದಿಯಲ್ಲಿ ನೆಲೆಗೊಳಿಸಿದರು. ಅವರ ಕೀರ್ತನೆಗಳಲ್ಲಿ ಭಗವಂತನ ನಾನಾರೂಪಗಳ ವರ್ಣನೆ, ಭಕ್ತನ ಅಂತರಂಗ ಶೋಧನೆ, ಕಳವಳ, ಸರ್ವಾರ್ಪಣ ಭಾವಗಳ ಜೊತೆಗೆ ಮಧ್ವ ಮತತತ್ವವೂ ನಿರೂಪಣೆಗೊಂಡಿದೆ. ನರಹರಿತೀರ್ಥ, ಶ್ರೀ ಪಾದರಾಯರು, ವ್ಯಾಸರಾಯ, ವಾದಿರಾಜ, ಪುರಂದರದಾಸರು, ಕನಕದಾಸ, ಮಹಿಪತಿದಾಸ, ವಿಜಯದಾಸ, ಮೋಹನದಾಸ, ಹೆಳವನಕಟ್ಟೆ ಗಿರಿಯಮ್ಮ, ಹರಪ್ಪನಹಳ್ಳಿ ಭೀಮವ್ವ ಮುಂತಾದವರು ಕೀರ್ತನ ಪರಂಪರೆಗೆ ಚಾಲಕರಾದರು. ೧೫ನೆಯ ಶತಮಾನದಲ್ಲಿ ಕೀರ್ತನ ಸಾಹಿತ್ಯ ಅಷ್ಟೊಂದು ಜನಪ್ರಿಯವಾಗಬೇಕಾದರೆ ಇವರೆಲ್ಲ ಆ ಹೊತ್ತಿಗೆ ಒಂದು ಪರಂಪರೆಯನ್ನು ನಿರ್ಮಿಸಿರಬೇಕು. ವೈದಿಕ ಸಂಪ್ರದಾಯದ ವರ್ಣವ್ಯವಸ್ಥೆಯ ಪುನರ್ ಪ್ರತಿಷ್ಠಾಪನೆಗೆ ಮತ್ತು ಮಧ್ವತತ್ವಗಳನ್ನು ಜನಸಾಮಾನ್ಯನಿಗೆ ಪರಿಚಯಿಸುವುದೇ ಕೀರ್ತನೆಗಳ ಗುರಿಯಾಯಿತು.

ಸಂಸ್ಕೃತವನ್ನು ವ್ಯವಸ್ಥೆಯ ರಕ್ಷಣೆಯ ಸಾಧನವನ್ನಾಗಿಯೂ, ಪಾಂಡಿತ್ಯದ ಭದ್ರ ಕೋಟೆಯನ್ನಾಗಿ ಮಾಡಿಕೊಂಡಿದ್ದ ಕರ್ನಾಟಕದ ವೈದಿಕರು ಬದಲಾದ ಸಾಮಾಜಿಕ ಮತ್ತು ಧಾರ್ಮಿಕ ಪರಿಸರದಲ್ಲಿ ಕನ್ನಡದಲ್ಲಿ ಬರೆಯುವದು ಅನಿವಾರ್ಯವಾಯಿತು. ವರ್ಣವ್ಯವಸ್ಥೆಯನ್ನು ಬಿಗಿಗೊಳಿಸಿ ಜನಸಾಮಾನ್ಯರಲ್ಲಿ ಆ ಬಗ್ಗೆ ನಿಷ್ಠೆಯನ್ನುಂಟು ಮಾಡಲು ಅವರಿಗೆ ಅರ್ಥವಾಗುವ ಭಾಷೆಯಲ್ಲಿ ಸಾಹಿತ್ಯ ಸೃಷ್ಟಿಸುವ ಅಗತ್ಯವನ್ನು ಎಂದಿಗಿಂತ ಅಧಿಕವಾಗಿ ವೈದಿಕರು ಮನಗಂಡಿದ್ದರು.''ವರ್ಣವ್ಯವಸ್ಥೆಯಲ್ಲಿ ಮತ್ತೆ ಶೂದ್ರರಲ್ಲಿ ವಿಶ್ವಾಸ ಮೂಡಿಸಲು ಬಳಸಿದ ಕನ್ನಡವೆ ವೈದಿಕ ಕನ್ನಡ''(ಕೆ.ಜಿ.ನಾಗರಾಜಪ್ಪ:೧೯೮೫:೨೩) ತನ್ನ ಜನರ ಸಂಸ್ಕೃತಿಯನ್ನು ಖಂಡಿಸಿ ಆದಿಕೇಶವನನ್ನು ಎತ್ತಿ ಹಿಡಿದಕನಕದಾಸರು ಬ್ರಾಹ್ಮಣೀಕರಣಕ್ಕೆ ಒಳಗಾದರೂ ಅವರ ರಾಮಧ್ಯಾನ ಚರಿತ್ರೆಯಲ್ಲಿ ವರ್ಗಪ್ರಜ್ಞೆಯ ಸುಳಿವಿದೆ.

ಹರಿದಾಸತನ ಹಿಂದೂ ಸಂಸ್ಕೃತಿಯನ್ನು ರಕ್ಷಿಸುವ ಉದ್ದೇಶಕ್ಕಾಗಿಯೇ ಹುಟ್ಟಿಕೊಂಡಿದ್ದೆಂದು ಹೇಳುತ್ತಲೇ ಮತ್ತೆ ತನ್ನಅಭಿವ್ಯಕ್ತಿಗೆ ವಚನ ಮಾದರಿಯನ್ನು ಅನುಸರಿಸಿದ ಸಂದರ್ಭವನ್ನು ಅನಿವಾರ್ಯವಾಗಿ ಪ್ರಶ್ನಿಸಬೇಕಾಗುತ್ತದೆ. ತನ್ನ ಮೇಲಾಗುತ್ತಿರುವ ಇಸ್ಲಾಂನಂತ ಅನ್ಯ ಆಕ್ರಮಣಗಳನ್ನು ಪ್ರತಿಭಟಿಸುವ ಉದ್ದೇಶದಿಂದ ಹುಟ್ಟಿಕೊಂಡ ಹರಿದಾಸ ಆಂದೋಲನ ಯಾವ ಘನೋದ್ದೇಶಕ್ಕಾಗಿ ಹುಟ್ಟಿಕೊಂಡಿತೋ ಅದನ್ನು ಪೂರೈಸಲಾಗದೆ ವೈದಿಕತನಕ್ಕೆ ಕಟ್ಟುಬಿದ್ದಿದ್ದರಿಂದ ಹರಿದಾಸ ಸ್ವರೂಪ ವಿಫಲವಾಯಿತು. ರಾಮಾಯಣ, ಮಹಾಭಾರತ, ಭಾಗವತಗಳು, ವಿಪುಲ ಸಾಮಗ್ರಿಯನ್ನೊದಗಿಸಿದರೂ ಸೃಜನಶೀಲವಾಗಬಲ್ಲ ಸಾಹಿತ್ಯ ನಿರ್ಮಿತಿ ಅವರಿಂದ ಸಾಧ್ಯವಾಗಲೇ ಇಲ್ಲ. ಭಾಗವತವಂತೂ ಸಾಕ್ಷಾತ್ ಶ್ರೀ ಹರಿಯ ಲೀಲಾಕಥನವೇ ಆಗಿ ಭಾಗವತ ಹಸ್ತಪ್ರತಿಗಳ ತುಂಬ ಇದೇ ವಿಷಯ ನಿರೂಪಣೆಯಾಯಿತು.ನಾಗರಸನ 'ಭಗವದ್ಗೀತೆ'[೧೦] ನಿರಕ್ಷರಕುಕ್ಷಿಯ 'ಭಗವದ್ಗೀತೆ'[೧೧] ಚಿಕ್ಕದೇವರಾಜನ 'ಭಾಗವತ ಟೀಕು'[೧೨] ಚಿಕ್ಕುಪಾಧ್ಯಾಯನ 'ಭಗವದ್ಗೀತಾ ಟೀಕು'[೧೩] ಮುಂತಾದ ಹಸ್ತಪ್ರತಿಗಳು ಭಾಗವತ ಕಥೆಯನ್ನು ನಿರೂಪಿಸುವಲ್ಲಿ ಗಟ್ಟಿಗೊಳ್ಳುವುದರ ಮೂಲಕ ಹರಿಯನ್ನು ಬಿಟ್ಟು ಹೊರಬರಲೇ ಇಲ್ಲ.

ಹೀಗೆ ಧರ್ಮ, ತತ್ವ,ನೀತಿಯಂತಹ ಪ್ರಧಾನ ದೃಷ್ಟಿಗಳು, ರಾಜಸ್ಥಾನಗಳು, ಪಂಡಿತಮಂಡಲಿಗಳು ಮತ್ತು ಕೇವಲ ಧಾರ್ಮಿಕ ಶ್ರದ್ಧೆಯ ಸಹೃದಯರು ಹೇಗೆ ಸಾಹಿತ್ಯ ಪರಂಪರೆಗೆ ಕಾರಣವಾಗುತ್ತಾರೆಂಬುದನ್ನು ಸ್ಥೂಲವಾದ ಈ ಸಮೀಕ್ಷೆಯಿಂದ ಮನಗಾಣಬಹುದು.

**ಅಡಿಟಿಪ್ಪಣಿ:**

೧. ಕೆ.ಎ.೨೧೧/೧ ಸಂ: ಎಚ್ ದೇವೀರಪ್ಪ:೧೯೬೨:ಮೈಸೂರು ಪ್ರಾಚ್ಯ ವಿದ್ಯಾಸಂಶೋಧನಾಲಯದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ. ಸಂ:೧ ಪುಟ ೧೭೧

೨.ಕೆ. ೪೯ ಅದೇ ಸಂ:೨ ಪುಟ ೨೮೬

೩.ಕೆ.ಎ. ೩೩ ಅದೇ ಸಂ:೨ ಪುಟ ೬೩

೪.ಕೆ. ೬೯ ಅದೇ ಸಂ:೧ ಪುಟ ೪೬೬ ---

೫.ಕೆ.ಬಿ. ೪೫೫ ಅದೇ ಸಂ:೩ ಪುಟ ೩೪೭

೬.ಕೆ.ಬಿ. ೪೬೮ ಅದೇ ಸಂ:೩ ಪುಟ ೩೪೮

೭.ಕೆ.ಎ ೩/೬ ಅದೇ ಸಂ:೩ ಪುಟ ೪೨೪

೮. ಕೆ. ೧೬೩/೪ ಸಂ. ಎಸ್ ಶಿವಣ್ಣ: ೧೯೮೨ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಬೆಂಗಳೂರು ವಿಶ್ವವಿದ್ಯಾಲಯ: ಸಂ:೧ ಪುಟ ೧೬೮

೯. ಕೆ. ೯/೮ ಅದೇ ಸಂ:೧ ಪುಟ ೨೨೩

೧೦. ಕೆ. ೧೮೧/೧ ಸಂ: ಎಚ್ .ದೇವೀರಪ್ಪ :೧೯೬೨: ಸಂ:೩ ಪುಟ ೯೭

೧೧. ಕೆ.ಬಿ.೩೪೮ ಅದೇ ಸಂ:೩ ಪುಟ ೧೦೩

೧೨. ಕೆ. ೧೬ ಅದೇ ಸಂ:೩ ಪುಟ ೧೪೨

೧೩. ಕೆ. ೪೬೬ ಅದೇ ಸಂ:೩ ಪುಟ ೮೭

೩ ರೂಪ ಹಾಗೂ ವಿಷಯ ಸ್ವರೂಪಗಳ ವೈವಿಧ್ಯತೆ:

ಅ) ಜೈನ ಧಾರ್ಮಿಕ ಹಸ್ತಪ್ರತಿಗಳು: ಭವಾವಳಿ: ತೀರ್ಥಂಕರ ಚರಿತೆ: ತ್ರಿಷಷ್ಠಿ ಶಲಾಕ ಪುರುಷರ ಚರಿತೆ:ಪಂಚಕಲ್ಯಾಣ: ಇತ್ಯಾದಿ. ಮತ್ತು ಲೌಕಿಕ ಕೃತಿಗಳು

ಹಿಂದಿನ ಎರಡೂ ಅಧ್ಯಾಯಗಳಲ್ಲಿ ರೂಪ ಹಾಗೂ ವಿಷಯಗಳ ಸ್ವರೂಪವನ್ನು ಹಸ್ತಪ್ರತಿಗಳ ಹಿನ್ನೆಲೆಯಲ್ಲಿ ಸ್ಥೂಲವಾಗಿ ಚರ್ಚಿಸಲಾಗಿದೆ.ಈ ಅಧ್ಯಾಯದಲ್ಲಿ ಎರಡಕ್ಕೂ ಇರುವ ಸಾಮ್ಯ ವೈವಿಧ್ಯತೆಯನ್ನು ಗುರುತಿಸಲಾಗಿದೆ.ಅಂದರೆ ಯಾವರೂಪದಲ್ಲಿ ಯಾವ ವಿಷಯ ಬಳಕೆಗೊಂಡಿತು ಮತ್ತು ಯಾವ ವಿಷಯದ ಅಭಿವ್ಯಕ್ತಿಗೆ ಎಂಥರೂಪಚಾರಿಗೆ ಬಂತು ಎಂಬುದನ್ನು ವಿವರಿಸಲಾಗಿದೆ. ಆದರೆ ಇಲ್ಲಿ ಯಾವುದು ಮೊದಲು ಮತ್ತು ನಂತರ ಎಂಬ ಅಂತಿಮ ಗ್ರಹಿಕೆ ತಿಳಿಯದೆ "ಬೀಜವೃಕ್ಷ ನ್ಯಾಯ"ದಂತೆ ಸಂದೇಹ ನಿಗೂಢವಾಗಿಯೆ ಉಳಿದು ಬಿಡುತ್ತದೆ. ಡಾ.ವೀರಣ್ಣರಾಜೂರಅವರ ಅಭಿಪ್ರಾಯದಂತೆ "ಕನ್ನಡ ಹಸ್ತಪ್ರತಿಗಳ ರೂಪ ಹಾಗೂ ವಿಷಯ ವೈವಿಧ್ಯ, ಧರ್ಮತತ್ವ, ಸಾಹಿತ್ಯರೂಪ, ಛಂದೋರೂಪ, ಮತ್ತು ವಿವಿಧ ವಸ್ತುಗಳ ಸಮನ್ವಯವನ್ನು ಸಾಧಿಸಿಕೊಂಡು ವೈವಿಧ್ಯಮಯವಾಗಿ ಬೆಳೆದು ಬಂದಿದೆ.ಕಾಲಕಾಲಕ್ಕೆ ಛಂದೋರೂಪಕ್ಕೆ ತಕ್ಕ ವಸ್ತು, ವಸ್ತುವಿಗೆ ತಕ್ಕ ಛಂದೋರೂಪ ಹೊಂದಿಕೊಳ್ಳತ್ತ ಬಂದು ಈ ರೂಪಕ್ಕೆ ಈ ವಸ್ತುವೇ ಸರಿ ಎನ್ನುವಷ್ಟರ ಮಟ್ಟಿಗೆ ತಾದಾತ್ಮ್ಯವನ್ನುಸಾಧಿಸಿದುದು ಕಂಡುಬರುತ್ತದೆ "(೯೮೩;೭೯) ಅಂದರೆ ಇಲ್ಲಿ ರೂಪ ಮತ್ತು ವಿಷಯಗಳು ವೈವಿಧ್ಯತೆಯನ್ನು ಪಡೆಯುವದು ಸಮಾಜ ಮತ್ತು ಓದುಗನ ಪ್ರಜ್ಞೆಯಿಂದ. ಸಮುದಾಯಕ್ಕೆ ಒಂದು ರೂಪ ಅಥವಾ ಆ ರೂಪದಲ್ಲಿ ಅಭಿವ್ಯಕ್ತವಾದ ವಿಷಯ ಬೇಡವೆನಿಸದಾಗ ಅವು ತಮ್ಮ ಅಸ್ತಿತ್ವವನ್ನೆ ಪ್ರಶ್ನಿಸಿಕೊಳ್ಳವ ಸಂಧಿಗ್ದತೆಗೆ ಒಳಗಾಗುತ್ತಿದ್ದವು. ಇದರ ಒಟ್ಟು ಪರಿಣಾಮವಾಗಿ ಹಸ್ತಪ್ರತಿಗಳು ತಮ್ಮ ಹಿಂದಿನ ಪರಂಪರೆಯನ್ನು ಪ್ರತಿಭಟಿಸಿ ಬೇರೆ ರೂಪವನ್ನು ತಾಳಿದರೆ, ಹಸ್ತಪ್ರತಿ ವಿಷಯ ಸ್ವರೂಪ ಈಗಾಗಲೇಸ್ಥಾಪಿತವಾದ ಹಳೆಯ ವಸ್ತು ಪರಂಪರೆಗೆ ಬೇರೆ ವಿಷಯ ವೈವಿಧ್ಯವನ್ನು ಸೇರಿಸುವುದರ ಮೂಲಕ ಹೊಸ ಪ್ರಯೋಗಗಳಿಗೆ ಕಾರಣವಾಗುತ್ತಿತ್ತು.

ವೈ.ಸಿ.ಭಾನುಮತಿ ಅವರು ಹೇಳುವಂತೆ "ಪ್ರಾಚೀನ ಭಾರತೀಯ ಸಾಹಿತ್ಯವೆಲ್ಲ ಧಾರ್ಮಿಕವಾದುದು. ಧರ್ಮ ಮತ್ತು ಸಾಹಿತ್ಯಕ್ಕೆ ಗಾಢವಾದ ಸಂಬಂಧವಿದ್ದಂತೆ ಕಾಲದಲ್ಲಿ ಹಸ್ತಪ್ರತಿಕಾರರು ತಾವು ನಂಬಿದ ನೆಚ್ಚಿನ ಅನುಸರಿಸಿದ ಧರ್ಮಕ್ಕೆ ಸಂಬಂಧಿಸಿದ ಕೃತಿಗಳನ್ನು ಮಾತ್ರ ಪ್ರತಿಸುತ್ತಿದ್ದ ಸಂಗತಿ ಸಾಮಾನ್ಯವಾಗಿತ್ತು.ಸಹಜವಾಗಿತ್ತು"(೯೯೫;೫೪೪) ಎನ್ನುವಮಾತಿನಂತೆ ವೀರಶೈವ ಹಸ್ತಪ್ರತಿಕಾರರು ವೀರಶೈವ ಕೃತಿಗಳನ್ನೂ, ವೈದಿಕ ಹಸ್ತಪ್ರತಿಕಾರರು ವೈದಿಕ ಕೃತಿಗಳನ್ನು ರಚಿಸಿದಂತೆ ಜೈನರು ಜೈನಧರ್ಮದ ಕೃತಿಗಳನ್ನು ರಚಿಸಿದ್ದು ಸ್ಪಷ್ಟವಾಗುತ್ತದೆ.

ಕನ್ನಡ ಹಸ್ತಪ್ರತಿಗಳು ದ್ರಾವಿಡ ಪರಿಸರದಲ್ಲಿ ರೂಪಗೊಂಡರೂ, ವೈದಿಕ ಪರಂಪರೆಯ ಆರ್ಯ ಸಂಸ್ಕೃತಿಯನ್ನು ಹೊಂದಿದಂತವು. ಕನ್ನಡದ ಮೊದಲ ಹಸ್ತಪ್ರತಿಗಳು ಆರ್ಯ ಪ್ರಭಾವದ ಜೈನರಿಂದಲೇ ನಿರ್ಮಾಣವಾದವು. ಇದಕ್ಕೆಕರ್ನಾಟಕದಲ್ಲಿ ದೊರೆಕಿರುವ ಪ್ರಾಚೀನ ಶಾಸನಗಳ ಆಧಾರದಿಂದ ಹೇಳುವದಾದರೆ ಪ್ರಾಚೀನ ಕರ್ನಾಟಕದಲ್ಲಿ ವೈದಿಕ ಮತ್ತುಜೈನಧರ್ಮಗಳ ಪ್ರಸಾರ ಮಾತ್ರ ಹೆಚ್ಚು ಪ್ರಚಾರವಾಗಿದೆ. ನೃಪತುಂಗನ ಕಾಲದಲ್ಲಿ ವೈದಿಕಗಳಾದ ಶೈವ, ವೈಷ್ಣವ, ಧರ್ಮಗಳೆರಡೂ ಪ್ರಚಾರವಾಗಿದ್ದರೂ ಆದಿ ಕೃತಿಯಾದ ಕವಿರಾಜಮಾರ್ಗದ ಮೇಲೆ ಪ್ರಭಾವ ಬೀರಿದ್ದು ಆರ್ಯ ಸಂಸ್ಕೃತಿಯ ವೀರನಾರಯಣನದೆ. ಹೀಗಾಗಿ ಕಾವ್ಯ ಕಾವ್ಯಶಾಸ್ತ್ರ, ಮತಧರ್ಮಶಾಸ್ತ್ರ, ಲೌಕಿಕ ಶಾಸ್ತ್ರ. ಈ ಎಲ್ಲ ಬಗೆಯ ಕೃತಿ ರಚನೆಗೆ ಜೈನರೇ ಶ್ರೀಕಾರ ಹಾಕಿದ್ದು ಆರ್ಯ ಬಗೆಯ ಧೋರಣೆಯಿಂದ. ಇದಕ್ಕೆ ಮೊದಲು ಕನ್ನಡದ ಜೈನ ಧಾರ್ಮಿಕ ಸಾಹಿತ್ಯದ ಮೇಲೆ ಪ್ರಭಾವ ಬೀರಿದ ಮೂವರು ಮಹತ್ವದ ಕವಿಗಳೆಂದರೆ ಸಮಂತ ಭದ್ರ (ಕ್ರಿ.ಶ.೪೦೦),ಕವಿ

ಪರಮೇಷ್ಠಿ,(ಕ್ರಿ.ಶ ೫೫೦), ಮತ್ತು ಪೂಜ್ಯಪಾದ (ಕ್ರಿ.ಶ.೬೦೦) ಕರ್ನಾಟಕದ ಮುಂದಿನ ಕವಿಗಳೆಲ್ಲ ಇವರನ್ನು ಆರಾಧನಾ ದೃಷ್ಟಿಯಿಂದ ನೆನೆಯುತ್ತಾರೆ. ಸಮಂತ ಭದ್ರನ ಸಂಸ್ಕೃತ, ಪ್ರಾಕೃತ ಕೃತಿಗಳಿಗೆ ಹಳಗನ್ನಡದಲ್ಲಿವ್ಯಾಖ್ಯಾನಗಳು ರಚಿತವಾಗಿದೆ. ಆದರೆ ಈತ ಕನ್ನಡದಲ್ಲಿ ಕೃತಿ ರಚನೆ ಮಾಡಿರುವವರ ಬಗ್ಗೆ ರಚಿತವಾದ ದಾಖಲೆಗಳಿಲ್ಲಕವಿ ಪರಮೇಷ್ಠಿ, ತ್ರಿಷಷ್ಠಿ ಶಲಾಕ ಪುರುಷರ ಪುರಾಣವನ್ನು ಮತ್ತು 'ಕಲ್ಯಾಣಕಾರಕ'ಎಂಬ ವೈದ್ಯ ಕೃತಿಯನ್ನು ಪೂಜ್ಯಪಾದನು 'ಜೈನೇಂದ್ರ' ವ್ಯಾಕರಣವನ್ನೂ ರಚಿಸಿದ್ದಾರೆ. ಆದರೆ ಇವರಾರೂ ಕೂಡಾ ಕನ್ನಡದಲ್ಲಿ ಕೃತಿ ರಚನೆ ಮಾಡಿದ ಬಗ್ಗೆ ದಾಖಲೆಗಳಿಲ್ಲ ಮತ್ತು ಈವರೆಗೆ ಇವರ ಯಾವ ಹಸ್ತಪ್ರತಿಗಳೂ ದೊರೆತಿಲ್ಲ.

ಈಗ ಲಭ್ಯವಾಗಿರುವ ದಾಖಲೆಗಳಿಂದ ಕವಿರಾಜಮಾರ್ಗದಂತಹ ಲಕ್ಷಣ ಗ್ರಂಥಬಿಟ್ಟರೆ ಜೈನರ ಧಾರ್ಮಿಕ ಹಸ್ತಪ್ರತಿಗಳು ಗಮನ ಸೆಳೆಯುತ್ತವೆ. ಜೈನಧರ್ಮವನ್ನು ಪ್ರಚಾರಗೊಳಿಸುವ ಅಗತ್ಯಕ್ಕಾಗಿಯೇ ಹುಟ್ಟಿಕೊಂಡ ಜೈನಧಾರ್ಮಿಕ ವಿಷಯವುಳ್ಳ ಹಸ್ತಪ್ರತಿಗಳು ಚಂಪೂ, ಸಾಂಗತ್ಯ, ಕಂದ, ಗದ್ಯ ಮುಂತಾದ ರೂಪಗಳಲ್ಲಿ ತಮ್ಮ ವಿಷಯ ವೈವಿಧ್ಯವನ್ನು ಹಿಡಿದಿಟ್ಟುಕೊಂಡಿವೆ. ಪಂಪ,ರನ್ನ,ಪೊನ್ನ,ಜನ್ನರ ದಾರಿಯಲ್ಲಿ ಅನೇಕ ಹಸ್ತಪ್ರತಿಗಳು ರೂಪಗೊಂಡವು. ನೀತಿ, ವೈರಾಗ್ಯ ಅಹಿಂಸೆ ಇತ್ಯಾದಿ ಜೈನತತ್ವಗಳನ್ನು ವರ್ಣಿಸುವ ಚಂಪೂ ರೂಪದ ಬಂದುವರ್ಮನ ಜೀವಸಂಬೋಧನೆ[೧] ಹಸ್ತಪ್ರತಿಯು (ಕ್ರಿ.ಶ ೧೨೦೦) ಬಹುಮುಖ್ಯವಾದದ್ದು.

ಆದಿತ್ರ್ಥೇಶರಾಯನಮಃ

ಯೇನ ಸ್ವಯಂ ಬೋಧಮಯೇನ ಲೋಕಾ ಆಶ್ವಾಸಿತಾಃ---

ನ ಮೋಕ್ಷಮಾರ್ಗ್ಗೇ ಸಮಾಧಿನಾಥಂ ಪ್ರಣಿಮಾನಿತ್ಯಂ

ಶ್ರೀ ನಾರೀರಮಣಿಯ ಪಾದಕಮಲಂ ಶುದ್ಧ ಪ್ರಸಿದ್ಧಂ ಲಪ

ದ್ಯಾ...ನಾದಾರಾಮ ಪಾರದೃಗ್ವಳ ಸುಖಖ್ಯಾತಂ ವಿನೂತಂ ವಿನೇ

ಯಾನೀಕ ಪ್ರನಿರಾಜಿತಂ ತ್ರಿಭುವನಾದೀಶಂ ಜಿನೇಶಂ ಸಮಾ

ಧಾನ ಪ್ರಾಪ್ತಿಯನೀಗೆ ಭವ್ಯ ನಿಕರಕ್ಕಾಚಿತ್ಯಮಂ ಸ್ತುತ್ಯಮಂ"

ಜೈನ ತತ್ವಗಳನ್ನು ವರ್ಣಿಸುವ ಈ ಹಸ್ತಪ್ರತಿಯ ನಂತರ ಮತ್ತು ಪಂಪಾದಿ ರನ್ನರ ಕಾಲದ ಇನ್ನೂರ ವರ್ಷಗಳ ತರುವಾಯವೂ ಚಂಪೂ ರೂಪದಲ್ಲಿ ಕೆಲ ಹಸ್ತಪ್ರತಿಗಳು ಹುಟ್ಟಿಕೊಂಡವು.

ಕ್ರಿಶ. ೧೪ನೆಯ ಶತಮಾನದಲ್ಲಿ ಆಯತವರ್ಮನ "ರತ್ನಕರಂಡಕ"[೨] ಹಸ್ತಪ್ರತಿ ಮೇಲಿನ ಧೋರಣೆಯುಳ್ಳದ್ದು.

ಅಂತ್ಯ: ಶ್ರೀಮದಾಯತವರ್ಮ ವಿರಚಿತಮಪ್ಪ ರತ್ನಕರಂಡಕ

ದೊಳು ಸಮ್ಯಕ್ ಚಾರಿತ್ರ ಸ್ವರೂಪನಿರೂಪಣಂ

ತೃತೀಯ ಪರಿಚ್ಛೇದ:

ಎಂದು ಇದರಲ್ಲಿ ಸಮ್ಯಗ್ ದರ್ಶನ, ಸಮ್ಯಗ್ ಜ್ಞಾನ, ಸಮ್ಯಗ್ ಚಾರಿತ್ರ ಮುಂತಾದ . ಮುಂತಾದ ಜೈನ ಸಿದ್ಧಾಂತಗಳವಿವರಣೆ ಇದೆ.

ಇದೇ ಹೊತ್ತಿನಲ್ಲಿ ಸಾಂಗತ್ಯ ರೂಪದಲ್ಲಿ ಅನೇಕ ಹಸ್ತಪ್ರತಿಗಳು ರೂಪದಳೆದವು. ಚಿಕ್ಕಪದ್ದಣ್ಣಶೆಟ್ಟಿಯ ಅನಂತನಾಥನ ಚರಿತ[೩] ಜೈನತತ್ವವನ್ನು ವಿವರಿಸುವ ಪಾಯಣ್ಣನ 'ಅಹಿಂಸಾ ಚರಿತೆ'[೪] ಜೈನಧರ್ಮದ ಕರ್ತವ್ಯ ಗಳನ್ನು ಪ್ರತಿಪಾದಿಸುವ ನೇಮೀತಿವ್ರತಿಯ 'ಜೈನವಚನಾಮೃತ ಶರಧಿ'[೫] ಮುಂತಾದವು ವಿಷಯದ ಸಂದರ್ಭದಲ್ಲಿ ಗಮನ ಸೆಳೆಯುವ ಹಸ್ತಪ್ರತಿಗಳು.

ಪಂಪ, ಪೊನ್ನ,ರನ್ನ ಜನ್ನ ಶಿವಕೋಟಿ ಅಥವಾ ಬಾಜಿಷ್ನು, ಚಂದ್ರಸಾಗರವರ್ಣಿ, ಆಯತವರ್ಮ, ಮುಂತಾದ ಕವಿಗಳು, ತಮ್ಮ ಕಾವ್ಯಗಳ ಮೂಲಕ ಜೈನಧರ್ಮವನ್ನು ಪ್ರತಿಪಾದಿಸಿದ್ದಾರೆ. ಮೇಲೆ ಸೂಚಿಸಿದಆಯತವರ್ಮನೆಂಬ ಜೈನಕವಿ (ಕ್ರಿ.ಶ ೧೪೦೦) ತನ್ನ ಕನ್ನಡ ರತ್ನಕರಂಡಕ' ಚಂಪೂ ಕೃತಿಯಲ್ಲಿ ರತ್ನಮಯವನ್ನುಹೀಗೆ ವರ್ಣಿಸಿದ್ದಾನೆ. ಉದ್ಧೃತ: (ಎಂ.ಪಿ ಸೀತಾರಾಮಮ್ಮ ಶಾಸ್ತ್ರ ಸಾಹಿತ್ಯ (೧೯೭೫;೨೩೩).

ತತ್ವದ ರುಚಿ ಸಮ್ಯಕ್ತ್ವಂ, ತತ್ವಂಗಳಂ, ಒಳ್ಳಿತಾಗಿ ಅರಿವು ಬೋಧಂ
ಸತ್ವಂ ತನ್ನೊಳ್ ನೆರೆದಿರೆ ಸತ್ವಂಗಳಂ ಡವಿ ಕಾವುದು ಅದುವೆ ಚರಿತ್ರಂ

ಇತರ ಜೈನಕವಿಗಳು ಬಳಸಿರುವ ಉಪಮಾನಗಳನ್ನೆ ಬಳಸಿಕೊಂಡು ಈ ಕವಿ ವೈರಾಗ್ಯದ ತಿರುಳಾದ ಸಂಸಾರದ ನಿಸ್ಸಾರತೆಯನ್ನು, ನಶ್ವರತೆಯನ್ನು ವರ್ಣಿಸಿದ್ದಾನೆ.

ಜಳಬುದ್ಬುದದಿಂ ಕ್ಷಣಿಕಂ,ಜಳಧರ ನಿವಹಂಗಳಿಂದ ಅಧ್ರುವಂ, ಉಳ್ಕಂ.
ಗಳ ರಂಜನೆಯಂತೆ ಅಚಿರಂ, ಬಳಸಿದ ಬಂಧ್ರುಗಳಂ ಒಡಲುಂ ಒಡೆಯಂ ಎಂತುಂ

ವೈರಾಗ್ಯ ಉಂಟಾಗಿದ್ದಿದ್ದರೆ ಮೋಕ್ಷದ ಕಡೆಗೆ ಮನಸ್ಸು ತಿರುಗುವುದಿಲ್ಲ. ಇದು ಜೈನ ಧರ್ಮದ ಪ್ರಧಾನ ತತ್ವವೂ ಹೌದು ಮೇಲಿನ ವಿವಿಧ ಪದ್ಯಗಳಿಂದ ಈ ಬಗೆಯ ತತ್ವವನ್ನು ಆಯತವರ್ಮ ತನ್ನ ರತ್ನಾಕರಂಡಕದಲ್ಲಿ ವಿವರವಾಗಿವರ್ಣಿಸಿದ್ದಾನೆ. ಇದೇ ಕಾಲದಲ್ಲಿದ್ದ ಚಂದ್ರಕೀರ್ತಿ ಎಂಬವನು ೧೩೨ ಕಂದ ವೃತ್ತ ಪದ್ಯಗಳಿಂದ ಕೂಡಿರುವ `ಪರಮಾಗಮಸಾರ' ಎಂಬ ಕೃತಿಯಲ್ಲಿ ಆತ್ಮ ಸ್ವರೂಪ ವೈರಾಗ್ಯ ಮುಂತಾದ ವಿಷಯಗಳನ್ನು ನಿರೂಪಿಸಿದ್ದಾನೆ. ಹಾಗೆಯೇ ಅನುಪ್ರೇಕ್ಷ ಎಂಬ ವಿಶೇಷ ರೂಪದಲ್ಲಿ ಜೈನ ತತ್ವ ಧರ್ಮವನ್ನು ವರ್ಣಿಸಿರುವ ಹಸ್ತಪ್ರತಿಗಳಿವೆ. ಕ್ರಿ.ಶ. ೧೪೯೯ರಲ್ಲಿ ಕಲ್ಯಾಣಕೀರ್ತಿ `ಅನುಪ್ರೇಕ್ಷೆ' ಎಂಬ ಹಸ್ತಪ್ರತಿಯನ್ನು, ವಿಜಯಣ್ಣನು ಕ್ರಿಶ ೧೪೪೮' ದ್ವಾದಶಾನುಪ್ರೇಕ್ಷ ಎಂಬ ಕೃತಿಯನ್ನು ಬರೆದಿದ್ದಾರೆ.

ಜೈನಧರ್ಮವನ್ನು ವರ್ಣಿಸುವ ಹಸ್ತಪ್ರತಿಗಳು ಭವಾವಳಿ, ತೀರ್ಥಂಕರ ಚರಿತೆ, ತ್ರಿಷಷ್ಠಿ ಶಲಾಕ ಪುರುಷರ ಚರಿತೆ, ಪಂಚಕಲ್ಯಾಣ ಮುಂತಾದ ವಿಷಯ ವೈವಿಧ್ಯ ಮತ್ತು ರೂಪ ವೈವಿಧ್ಯದ ಹಿನ್ನೆಲೆಯಲ್ಲಿ ಅಭಿವ್ಯಕ್ತಗೊಂಡಿವೆ. ಒಂದುಧಾರ್ಮಿಕ ವಸ್ತು ಕೇಂದ್ರವಾಗಿ ಅದರ ಸುತ್ತಲೂ ಅನೇಕ ಬಗೆಯ ವಿಷಯ ನಿರೂಪಣೆಗಳು ಪ್ರಯೋಗವಾಗಿದ್ದು ಬಹುಶಃಜೈನ ಧಾರ್ಮಿಕ ಹಸ್ತಪ್ರತಿಗಳಲ್ಲಿಯೇ. ಈ ಬಗೆಯ ವಸ್ತು ವಿನ್ಯಾಸ ಮುಂದಿನ ವೀರಶೈವ ಮತ್ತು ವೈದಿಕ ಸಂದರ್ಭದಲ್ಲಿ ಪ್ರಯೋಗವಾಗದಿರುವದಕ್ಕೆ ಮತ ಧಾರ್ಮಿಕ ಪ್ರತಿಷ್ಠೆಗಳೆ ಕಾರಣವಾಗಿವೆ. ಧರ್ಮ ಪ್ರಸಾರಕ್ಕೆ ಏನೆಲ್ಲ ಪರಿಹಾರಗಳು ಬೇಕೋ ಆ ಎಲ್ಲ ಸಾಧ್ಯತೆಗಳನ್ನು ಜೈನ ಹಸ್ತಪ್ರತಿಗಳು ಬಳಸಿಕೊಂಡವು. ಆದ್ದರಿಂದ ಜೈನ ಹಸ್ತಪ್ರತಿಗಳು ರೂಪ ವೈವಿಧ್ಯತೆಗಿಂತ ವಿಷಯ ವೈವಿಧ್ಯಕ್ಕೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಿದ್ದುಕಂಡು ಬರುತ್ತದೆ. ಈ ಮಾತನ್ನು ಬೇರೆ ಬೇರೆ ವಿಷಯ ಸ್ವರೂಪಗಳನ್ನು ವಿಶ್ಲೇಷಿಸುವದರ ಮೂಲಕ ಸಮರ್ಥಿಸಿಕೊಳ್ಳಬಹುದು.

ಭವಾವಳಿ:

ಜೈನ ಹಸ್ತಪ್ರತಿಗಳಲ್ಲಿ ಎರಡು ಪ್ರಧಾನ ವಿಷಯಗಳಿಗೆ ಮಹತ್ವವಿದೆ. ಒಂದು ತೀರ್ಥಂಕರನಾಗುವವರೆಗಿನ ಸಾಧನೆಯ ಕಥೆ ಇದೆ. ಭವಾವಳಿ,ಇನ್ನೊಂದು ತೀರ್ಥಂಕರನಾಗಿ ಭವ್ಯಜೀವನ ನಡೆಸಿ ನಿತ್ಯತ್ವವನ್ನು ಹೊಂದುವವರೆಗಿನ ಕಥೆ. ಭವಾವಳಿಎಂದರೆ ಜೈನ ಸಾಧಕನೊಬ್ಬನ ಜೀವನ ವೃತ್ತಾಂತ, ಜಿನನ ಪೂರ್ವಜನ್ಮದ ಚರಿತ್ರೆ. ಪಾಪಕರ್ಮದ ಫಲವಾಗಿ

ನೂರಾರು ಜೀವಿಗಳಲ್ಲಿ ಹುಟ್ಟಿ, ಒಂದೊಂದು ಜೀವದಲ್ಲಿ ಪಾಪವನ್ನು ವಿಮೋಚಿಸಿಕೊಳ್ಳುವ ಹಂತ. ಈ ಎಲ್ಲ ಜನ್ಮಗಳನ್ನು ದಾಟಿಮೋಕ್ಷ ಪದವಿ ಸೇರುವ ಜೈವಿಕ ಪರೀಕ್ಷೆ ಈ ಭವಾವಳಿಗಳು. ವ್ಯಕ್ತಿ ಎಷ್ಟೆ ಕೆಟ್ಟವನಾಗಿರಲಿ ಆತನನ್ನು ಆದರ್ಶೀಕರಿಸುವ ಜೈನಪರಿಭಾಷೆಯಲ್ಲಿ ಹೇಳುವದಾದರೆ `ಕೇವಲ' ಗೊಳಿಸುವ ತಾಂತ್ರಿಕ ಶಕ್ತಿಯನ್ನು ಭವಾವಳಿ ಸ್ವರೂಪಹೊಂದಿದೆ. ಇದು ಜಿನನ ವ್ಯಕ್ತಿತ್ವ ಮತ್ತು ಆ ಧರ್ಮವನ್ನು ಪರಿಪಾಲಿಸುವ ಒಂದು ಕ್ರಿಯಾಚರಣೆ. ಇಲ್ಲಿ ವ್ಯಕ್ತಿ ಮುಂದಿನಮೋಕ್ಷದ ಪರಿಣಾಮಕ್ಕಾಗಿ ಪಾಪವನ್ನು ಮಾಡುತ್ತಲೆ ಹೋಗಬೇಕು. ಮತ್ತೆ ಆ ಪಾಪಗಳನ್ನು ವಿಮೋಚಿಸಿಕೊಳ್ಳಲು ಭವಾವಳಿಗಳನ್ನು ದಾಟಬೇಕು. ಇದು ಭವಾವಳಿಗಳ ನಿತ್ಯ ಕರ್ಮ. ಇಲ್ಲಿ ವ್ಯಕ್ತಿಯ ನಿಜವಾದ ಬದುಕಿನ ಸಾಮರ್ಥ್ಯಕ್ಕೆಅಡ್ಡಗಾಲಿಟ್ಟು "ನೀನು ಹೀಗೆಯೇ ಬದುಕಬೇಕು" ಎಂಬ ಜೀವನ ವಿರೋಧಿ ಒತ್ತಾಯ ಇಲ್ಲಿ ಕೆಲಸ ಮಾಡುತ್ತಲೇ ಇರುತ್ತದೆ. ಹೀಗಾಗಿ ಜಿನನ ಧರ್ಮದಲ್ಲಿ ವ್ಯಕ್ತಿ ಸತ್ವಪೂರ್ಣ ಬದುಕನ್ನು ಅನುಭವಿಸದೆ ಮೋಕ್ಷ ಪಡೆಯಬೇಕು. ಜಿನಧರ್ಮ ಹಿಂಸೆಯನ್ನು ನಿರಾಕರಿಸುತ್ತಲೇ ಅಪರೋಕ್ಷವಾಗಿ ತನಗೆ ತಾನೇ ಹಿಂಸೆಯನ್ನು ಪ್ರತಿಪಾದಿಸಿಕೊಳ್ಳುವ ನೆಲೆಯತ್ತಗಟ್ಟಿಗೊಳ್ಳುತ್ತದೆ. ಸಾಂಗತ್ಯ ರೂಪದಲ್ಲಿರುವ ಕ್ರಿಶ ೧೪೪೭ರ ಪಾಯಣ್ಣ ಕವಿಯ `ಅಹಿಂಸಾ ಚರಿತೆ'[೭] ಯಂತ ಹಸ್ತಪ್ರತಿಗಳು ಹಿಂಸೆಯನ್ನು ಬಿಡಲು ಒತ್ತಾಯಿಸುತ್ತವೆ.

ಆದಿ: ಶ್ರೀ ಜಿನಾಯ ನಮಃ ನಿರ್ವಿಘ್ನಮಸ್ತು ಅಹಿಂಸಾಚರಿತೆ
ಬರವುದಕ್ಕೆ ಶುಭಮಸ್ತು
ಹಿಂಸೆಯ ಬಿಡಿರಣ್ಣ ಸಂಶಯವಿಲ್ಲದೆ
ಹಿಂಸಾಚರಿತೆಯ ಕೇಳಿ
ಕಂಸಾರಿಯ ಸುತವಾರಿಯ ನುತವಿದು
ಸಂಸಾರಣ್ಯ ದಹನವೂ

ಎಂದು ಅಹಿಂಸೆಯ ಸ್ವರೂಪವನ್ನು ವಿವರಿಸುತ್ತದೆ.

ಭವಾವಳಿಯಂತಹ ಧಾರ್ಮಿಕ ವಿಷಯವನ್ನು ಹೇಳುವ ಸಂದರ್ಭದಲ್ಲಿ ಎರಡು ಮನೋಧರ್ಮವುಳ್ಳ ಹಸ್ತಪ್ರತಿಗಳು ನಿರ್ಮಾಣವಾಗಿದೆ. ಒಂದು; ಜೈನ ಸ್ವರೂಪದ ಕತೆಯನ್ನು ಹೇಳುವಾಗ ಭವಾವಳಿ ವಿಷಯವನ್ನು ಹಿನ್ನೆಲೆಯಾಗಿ ಅಂದರೆ ಕಥೆಗಳ ಕಾವ್ಯಕ್ಕೆ ಪೂರಕವಾಗಿ ಬಳಸಿಕೊಳ್ಳವದು. ಚಂಪೂರೂಪದಲ್ಲಿ ಅಭಿವ್ಯಕ್ತಗೊಂಡ ಪಂಪನ ಆದಿಪುರಾಣ, ಜನ್ನನ ಅನಂತನಾಥ ಪುರಾಣ, ಅಗ್ಗಳನ ಕ್ರಿಶ ೧೧೮೯ `ಚಂದ್ರಪ್ರಭ ಪುರಾಣ'[೮] ಸಾಂಗತ್ಯ ರೂಪದಲ್ಲಿರುವ ದೊಡ್ಡಯ್ಯ ಕವಿಯ (ಕ್ರಿ.ಶ ೧೬೬೦) `ಚಂದ್ರನಾಥ ಚರಿತ್ರೆ'[೯] ಮುಂತಾದ ಹಸ್ತಪ್ರತಿಗಳು ಈ ಸಂಬಂಧವುಳ್ಳವು ದೊಡ್ಡಯ್ಯನ `ಚಂದ್ರನಾಥ ಚರಿತ್ರೆ'ಯ ಹಸ್ತಪ್ರತಿಯ ೨೮ ಆಶ್ವಾಸಗಳಲ್ಲಿ ಭವಾವಳಿ ವಿವರವಿದೆ.

ಆದಿ: ಶ್ರಿ ಪಂಚಗುರುಭ್ಯೊ ನಮಃ
ಅಂತ್ಯ: ಯಿದು ವಿಭುದಸ್ತುಕ ಚದುರ ದೊಡ್ಡೆ ್ಯಯ್ಯ ಪೇ
ಳಿದ ಚಂದ್ರ ಜಿನ ಚರಿತದೊಳು
ವಿದಿತಮಪ್ಪಾಶ್ವಾಸ ವಿಪ್ಪತ್ತೆಂಟುನೆಯದಿಂ
ತಿದನು ಭವ್ಯರು ಲಾಲಿಪುದು.

ಇಂಥ ಮೊದಲಾದ ಹಸ್ತಪ್ರತಿಗಳು ಕಥೆಗೆ ಪೂರಕವಾಗಿ ಭವಾವಳಿಯನ್ನು ವಿವರಿಸುತ್ತವೆ. ಎರಡು: ಭವಾವಳಿಗಳನ್ನೇ ಪ್ರಧಾನ ಉದ್ದೇಶವಾಗಿ ರೂಪಗೊಂಡ ಹಸ್ತಪ್ರತಿ. ನಾಗಕುಮಾರನ ಇಡೀ ಭವಾವಳಿಗಳನ್ನು ವರ್ಣಿಸುವ ಬಾಹುಬಲಿವರ್ಧಮಾನ ಕವಿಯ (ಕ್ರಿ.ಶ ೧೫೬೦) ಸಾಂಗತ್ಯರೂಪದ `ನಾಗಕುಮಾರ ಚರಿತೆ'[೧೦] ಈ ಬಗೆಯದು.

ಆದಿ: ಶ್ರಿ ವೀತರಾಗಾಯ ನಮಃ ಶುಭಮಸ್ತು

ನಾಗಕುಮಾರನ ಚರಿತೆಯ ಬರುವುದಕ್ಕೆ ನಿರ್ವಿಘ್ನಮಸ್ತು

ಪಲ್ಲ ಪೇಳುವೆ ನಾಗಕುಮಾರನ ಚರಿತವ

ಕೇಳಿರೊ ಸಕಲಕೋವಿದರೂ

ಪದ ಶ್ರೀ ಸನ್ಮಾರ್ಗ ಪ್ರಕಾಶ ಸುಜ್ಞಾನ ನಾಂಬ

ರಾಸಿವರ್ದ್ವನ ಸರ್ವಶಾಂತಾ

ಲೇಸುದೊರೆನ್ನ ಹೃತ್ಕುವಲಯಕಮೃತವ

ಗ್ಗೇಶ ಶ್ರಿ ನೇಮಿಜನೇಶಾ.

ಹೀಗೆ ಜೈನರ ಭವಾವಳಿಯ ಕೃತಿಗಳಲ್ಲಿ ಒಂದು ಜೀವದ ವಿಕಾಸ ಅಥವಾ ಅವನತಿಯ ಚಿತ್ರಣಗಳಿರುತ್ತವೆ. "ಜೀವಗಳುಜಾತಿಸ್ಮರರಾಗುವದು, ಅವಧಿ ಜ್ಞಾನದಿಂದ ಮುಂದಾಗುವದನ್ನು ತಿಳಿದುಕೊಳ್ಳುವದು ಮೊದಲಾದ ಅಂತರಂಗದ ವ್ಯಾಪಾರಗಳು ಈ ಕಥನ ತಂತ್ರದಲ್ಲಿ ಅನುಭವ ವೇಧ್ಯವಾಗುವಂತೆ ನಿರೂಪಿತವಾಗಿರುತ್ತವೆ." (ಕೀರ್ತಿನಾಥ ಕುರ್ತುಕೋಟಿ೧೯೯೫:೧೯) ಇದರಿಂದ ಈ ಪಾತ್ರಗಳ ಜೀವನದಲ್ಲಿ ಹೊಸ ಹೊಸ ಅರಿವುಗಳು ಮೂಡಿಕೊಳ್ಳುತ್ತವೆ. ಒಂದು ಹಂತದಿಂದ ಇನ್ನೊಂದು ಹಂತಕ್ಕೆ, ಪಾಪಕರ್ಮದಿಂದ ಮೋಕ್ಷ ಸಾಧನೆಗೇರುವ ಜೈನರ ಭವಾವಳಿಗಳಲ್ಲಿ ಜೀವದ ವಿಕಾಸ ಬಹು ಮುಖ್ಯವಾದದ್ದು. ಜೈನರು ತಮ್ಮ ಧರ್ಮದ ಸಂವಹನ ಕ್ರಿಯೆಗೆ ಬಳಸಿಕೊಂಡ ಭವಾವಳಿ ತಂತ್ರ ಅವರ ಧಾರ್ಮಿಕ ಹಸ್ತಪ್ರತಿಗಳ ವಿಷಯ ವೈವಿಧ್ಯದ ವಿಸ್ತಾರಕ್ಕೆ ಹೆಚ್ಚಿನ ಇಂಬು ಕೊಟ್ಟಿತು.

**ತೀರ್ಥಂಕರರ ಚರಿತೆ:**

ಜೈನ ಧಾರ್ಮಿಕ ಹಸ್ತಪ್ರತಿಗಳಲ್ಲಿ ಪ್ರಧಾನವಾಗಿ ನಿರೂಪಿಸಲ್ಪಟ್ಟ ವಿಷಯಗಳಿಗೆ ತೀರ್ಥಂಕರ ಚರಿತೆಗೆ ಮೊದಲ ಸ್ಥಾನವಿದೆ. ಈ ಪರಂಪರೆ ಜೈನ ಧರ್ಮದ ಪೂರ್ವ ಇತಿಹಾಸದಿಂದ ಪೂರ್ವಕಾಲೀನ ಇತಿಹಾಸವನ್ನು ಕಟ್ಟುವ ವಿಧಾನದ್ದು. ಅಂದರೆ ಹಿಂದಿನ ಅನೇಕ ತೀರ್ಥಂಕರರ ಧಾರ್ಮಿಕವಾದ ನೈತಿಕ ನಿಷ್ಠೆ ಮತ್ತು ಕಠಿಣ ಬದುಕಿನ ಆದರ್ಶಗಳನ್ನು ಮುಂದಿನ ಜನಾಂಗಕ್ಕೆ ಬೋಧಿಸುವುದರ ಮೂಲಕ ತೀರ್ಥಂಕರತ್ವಕ್ಕೇರಲು ಪ್ರಚೋದಿಸುವ ಮತ್ತು ಆ ಬಗೆಯ ಬದುಕಿಗೆ ಮನಸ್ಸನ್ನು ಹದಗೊಳಿಸುವ ಸ್ವರೂಪವೇ ತೀರ್ಥಂಕರರ ಚರಿತೆ. ಗಾಂಧಿಯ ಉಪವಾಸಾದಿಗಳ ಆದರ್ಶದ ಬದುಕು ಮುಂದಿನವರಿಗೆ ಸನ್ಮಾರ್ಗವಾಗಲು, ಗಾಂಧಿಯಂತೆ ಬದುಕಲು ಪ್ರೇರೆಪಿಸುವ ಈ ವಿಧಾನ ಜನಸಮುದಾಯಕ್ಕೆ ಎಷ್ಟು ಉಪಯುಕ್ತವಾಗಿದೆಯೆಂಬುದನ್ನು ಮರುವ್ಯಾಖ್ಯಾನಿಸಬೇಕಾಗಿದೆ. ಜಿನಧರ್ಮದ ಕರ್ಮಾಚರಣೆಯ ತೀರ್ಥಂಕರನಿಗಿಂತ ಮಿಗಿಲಾದ ವ್ಯಕ್ತಿತ್ವ ಹೊಂದಿದ ಕೆಳವರ್ಗದ ಸಾಮಾನ್ಯನೊಬ್ಬ ಇದರಿಂದ ದೂರ ಸರಿದು ಸ್ವತಂತ್ರವಾಗಿ ಬದುಕುವ ಮಾದರಿ ತೀರ್ಥಂಕರರಿಗೆ ತೀರಾ ಹಿಂಸೆ ಮತ್ತು ಸಂಕುಚಿತ ವಿಧಾನದ ಬದುಕಾಗುತ್ತದೆ. ತೀರ್ಥಂಕರತ್ವ ಕೇವಲ ಜೈನರಿಗೆ ಮಾತ್ರ ಬದ್ಧವಾದರೆ ತೀರ್ಥಂಕರ ಬದುಕಿನ ಆದರ್ಶತೆ ಇಡೀ ಮಾನವ ಧರ್ಮಕ್ಕೆ ಅಗತ್ಯವಾದ ಮೌಲ್ಯವೆಂಬುದನ್ನು ಜೈನಧರ್ಮಅರಿಯದೇ ಹೋಯಿತು.

ತೀರ್ಥಂಕರರೆಂದರೆ ಅರಿವನ್ನುಂಟು ಮಾಡುವರು, ಜ್ಞಾನಿಗಳೆಂದು ಅರ್ಥ. ಸಂಸಾರಿ ಜೀವರಿಗೆ ಪರಿನಿರ್ವಾಣ ಮಾರ್ಗವನ್ನು ತೋರಿಸಿಕೊಟ್ಟವರು. ಇವರಲ್ಲಿ ಸಾಮಾನ್ಯ ಕೇವಲಿ ಮತ್ತು ತೀರ್ಥಂಕರರೆಂದು ಎರಡು ವರ್ಗಗಳಿವೆ.ಸಾಮಾನ್ಯ ಕೇವಲಿಗಳು ತಮ್ಮ ಮುಕ್ತಿಯನ್ನು ಮಾತ್ರ ಸಾಧಿಸಿಕೊಂಡರೆ ತೀರ್ಥಂಕರರು ಅವರ ಜೊತೆಗೆ ಇತರರನ್ನುಮುಕ್ತಿಯ ದಡಕ್ಕೊಯ್ಯುವವರು, ಜೈನಧರ್ಮ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳುವ ಸಂದರ್ಭದಲ್ಲಿ ಇತರರಿಗೆಮುಕ್ತಿಯ ಆಸೆಯನ್ನು ತೋರಿಸುವ ನೆಪದಲ್ಲಿ ಸಾಮಾನ್ಯ ಕೇವಲಿಗಳಿಗಿಂತ ತೀರ್ಥಂಕರ ವಿಷಯವನ್ನು ಬಳಸಿಕೊಂಡುಜೈನ ಕವಿಗಳು ಹಸ್ತಪ್ರತಿಗಳನ್ನು ನಿರ್ಮಾಣ ಮಾಡಿದರು. ಶ್ರಾವಕ(ಜೈನ ಗೃಹಸ್ಥ), ಶ್ರಾವಿಕೆ, ಸಾಧು ಮತ್ತು ಸಾಧ್ವಿ ಎಂಬನಾಲ್ಕು ಬಗೆಯ ಜೈನ ಸಂಘಗಳನ್ನು ಇವರು ಸ್ಥಾಪಿಸಿದ್ದರಿಂದ ತೀರ್ಥಂಕರರಾದ ವಿಷಯವನ್ನು ಬೇರೆ ಬೇರೆ ರೂಪಗಳಲ್ಲಿ ನಿರ್ಮಾಣಗೊಂಡ ಹಸ್ತಪ್ರತಿಗಳು ಚರಿತ್ರಿಸುತ್ತವೆ. ಸಾಂಗತ್ಯರೂಪದಲ್ಲಿರುವ ನೇಮೀವ್ರತಿಯ (ಕ್ರಿ.ಶ ೧೫೫೯) 'ಸುವಿಚಾರ ಚರಿತೆ' ೧೧ ಹಸ್ತಪ್ರತಿಯನ್ನು ಈ ದೃಷ್ಟಿಯಿಂದ ಗಮನಿಸಬಹುದು.

ಅದರಸ್ವರೂಪ ಹೀಗಿದೆ.

ಆದಿ: ಶ್ರೀ ಮತ್ಪಂಚ ಗುರುಭ್ಯೋ ನಮಃ ನಿರ್ವಿಘ್ನಮಸ್ತು
ಯಿದು ಜಿನವಚನವೆಂಬ ಮ್ರುತ ಶರಧಿಯೊಳ
ಗುದಯಿಸಿದುದು ಶ್ರಾವಕ ರಾ
ಸದಮಲ ನೆಲೆಯೊಳಗೊಂದನೆಯದು ಸಂದಿ
ಮದನಾರ್ಇ ಜನರ ಸಂಬಂಧೀ

ಇದು ಶ್ರಾವಕ ತೀರ್ಥಂಕರ ವಿಷಯ ಹಾಗೂ ಅವರ ಆಚಾರ ವಿಚಾರವನ್ನು ವಿವರಿಸುವ ಹಸ್ತಪ್ರತಿಯಾಗಿದೆ.

ಈ ವಿಷಯದಲ್ಲಿ ಹಸ್ತಪ್ರತಿಗಳನ್ನು ರಚಿಸಿದ ಇತರ ಕವಿಗಳೆಂದರೆ ಅಗ್ಗಳ, ಆಚಣ್ಣ, ಬಂಧುವರ್ಮ, ಪಾರ್ಶ್ವ, ಜನ್ನ,ಎರಡನೆಯ ಗುಣವರ್ಮ, ಆಂಡಯ್ಯ, ಮಹಾಬಲ, ಕುಮದೇಂದು, ನಾಗರಾಜ, ವೃತ್ತ ವಿಲಾಸ, ಬಾಹುಬಲಿ, ಪಂಡಿತ,ಮಧುರ ಮುಂತಾದ ಕವಿಗಳು ವಿಸ್ತಾರವಾದ ತೀರ್ಥಂಕರ ಚರಿತೆಗಳನ್ನು ರಚಿಸುವದರ ಮೂಲಕ ವಸ್ತು ರೂಪ ಭಾಷೆಗಳಲ್ಲಿ ಹೊಸದನ್ನು ಪ್ರಯೋಗಿಸುವ ಪ್ರಯತ್ನ ಮಾಡಿದ್ದಾರೆ.

ಹೀಗೆ ಕನ್ನಡದ ಜೈನ ಕವಿಗಳು ಹಸ್ತಪ್ರತಿ ಪರಂಪರೆ ಮತ್ತು ಸಾಹಿತ್ಯ ಸಂದರ್ಭದಲ್ಲಿ ಧಾರ್ಮಿಕ ವಿಷಯವಾಗಿ ತೀರ್ಥಂಕರಸ್ವರೂಪವನ್ನು ವೈವಿಧ್ಯಮಯ ಹಾಗೂ ಪ್ರಯೋಗಿಕವಾಗಿಯೇ ಬಳಸಿಕೊಂಡರು.

ತ್ರಿಷಷ್ಠಿ ಶಲಾಕ ಪುರುಷರ ಚರಿತೆ

೧೦ನೆಯ ಶತಮಾನದ ಪೂರ್ವಾರ್ಧದಲ್ಲಿ ಆಳುವವರ್ಗದ ಲೌಕಿಕ ದೊರೆಯೊಬ್ಬ ಧಾರ್ಮಿಕವೆನ್ನಬಹುದಾದ ಗದ್ಯ ಕೃತಿಯೊಂದನ್ನು ರಚಿಸಿದ್ದು ಬಹುಮುಖ್ಯ ಘಟನೆ. ಗಂಗವಂಶದ ದೊರೆ ರಾಚಮಲ್ಲನ ಸೇನಾನಾಯಕ ಮತ್ತು ಮಂತ್ರಿ ರನ್ನನಿಗೆ ಆಶ್ರಯ ನೀಡಿದ ಚಾವುಂಡರಾಯ(ಕ್ರಿ.ಶ ೯೭೪-೯೮೪)ನೆಂಬ ಕವಿ ಸ್ವತಃದೊರೆಯಾಗಿ ಆ ಹೊತ್ತಿನಲ್ಲಿ ಬರೆಯುವ ಅಗತ್ಯತೆಯ ಬಗ್ಗೆ ಬೇರೆಯಾಗಿಯೇ ಅಧ್ಯಯಿನಿಸಬೇಕಾಗಿದೆ. ಕ್ರಿ.ಶ. ೯೭೮ರಲ್ಲಿ ರಚಿತವಾದ ಚಾವುಂಡರಾಯ ಪುರಾಣಕ್ಕಿರುವ ಇನ್ನೊಂದು ಹೆಸರೆ 'ತ್ರಿಷಷ್ಠಿ ಲಕ್ಷಣ ಮಹಾಪುರಾಣ'. ಗದ್ಯರೂಪದಲ್ಲಿರುವ ಈ ಕೃತಿ ಕನ್ನಡ ಗದ್ಯ ಶೈಲಿಯ ಆರಂಭದ ಬೆಳವಣಿಗೆಯನ್ನು ಕನ್ನಡಿಸುತ್ತದೆ. ಗದ್ಯರೂಪದಲ್ಲಿ ವಡ್ಡಾರಾಧನೆಯಷ್ಟೆ ಬಹುಮುಖ್ಯವಾದ ಈ

ಕೃತಿ ಕನ್ನಡದ `ತ್ರಿಷಷ್ಠಿಶಲಾಕರೆ ಪುರುಷ' ಪರಂಪರೆಯ ಮೊದಲ ಗ್ರಂಥವಾಗಿದೆಯಲ್ಲದೆ ಈಗ ದೊರೆತಿರುವ ಹಳಗನ್ನಡ ಗದ್ಯಕೃತಿಗಳಲ್ಲಿ ಇದೆ ಮೊದಲನೆಯದು `ತೀರ್ಥಂಕರರ ಜನ್ಮ ಜನ್ಮಾಂತರದ ಕಥೆಗಳಿಗೆ ಹಾಸು ಹೊಕ್ಕಾಗಿ ಹೊಂದಿಕೊಂಡಂತೆ ಜೈನಧರ್ಮದ ಮುಖ್ಯ ತತ್ವಗಳ ನಿರೂಪಣೆ ಇರುವುದರಿಂದ ಚಾವುಂಡರಾಯ ಪುರಾಣವನ್ನು ಜೈನಧರ್ಮದ ಕೈಪಿಡಿ ಎನ್ನಬಹುದು `(ಎಂ.ವಿ.ಸೀತಾರಾಮಯ್ಯ,೧೯೭೩,೨೩೧)ತೀರ್ಥಂಕರ ಚರಿತೆಗಳಂತೆ ವಿಷಯವನ್ನು ಚಾವುಂಡರಾಯ ಪುರಾಣದ ವಸ್ತು ನೇರವಾಗಿಯೂ, ಪರಿಣಾಮಕಾರಿಯಾಗಿಯೂ ವರ್ಣಿಸುವುದರಿಂದ `ಚಾವುಂಡರಾಯ ಪುರಾಣ' ಬೇರೆ ಕೃತಿಗಳಿಗಿಂತ ಮುಖ್ಯವೆನಿಸುತ್ತದೆ. ಜೈನಧರ್ಮದ ೬೩ರ ಮಹಾಪುರುಷರ ಚರಿತ್ರೆಯೇ ಈ ಕೃತಿಯ ವಸ್ತು. ಈ ಪರಂಪರೆಯ ಮುಂದಿನ ಕನ್ನಡ ಕೃತಿಗಳಿಗೆ ಇದು ನೆರವಾಯಿತಲ್ಲದೆ, ಆ ಬಗೆಯ ಇತಿಹಾಸವನ್ನು ತಿಳಿಯುವ, ಅನೇಕ ಸೂಕ್ಷ್ಮಗಳನ್ನು ಒದಗಿಸುತ್ತದೆ. ಹೀಗೆ ಅಧಿಕೃತವಾಗಿ ತ್ರಿಷಷ್ಠಿ ಶಲಾಕ ಪುರುಷರ ವಿಷಯದಲ್ಲಿ ಬರೆಯುವ ಪರಂಪರೆ ೧೦ನೆಯ ಶತಮಾನದ ಹೊತ್ತಿಗೆನೆ ಆರಂಭವಾಯಿತು. ಆದರೆ ಇದಕ್ಕೆ ಕ್ರಿ.ಶ. ೫೦೦ರಲ್ಲಿದ್ದ ಕವಿ ಪರಮೇಷ್ಠಿಯ `ತ್ರಿಷಷ್ಠಿ ಶಲಾಕ ಪುರುಷ ಪುರಾಣ' ಆಧಾರವಾಗಿರುವ ಸಾಧ್ಯತೆಗಳಿವೆ. ಆದರೆ ಇದು ಕನ್ನಡ ಅಥವಾ ಸಂಸ್ಕೃತದಲ್ಲಿರುವ ಬಗ್ಗೆ ಖಚಿತ ದಾಖಲೆಗಳು ದೊರೆತಿಲ್ಲ. ಹಾಗೇನಾದರೂ ಕವಿ ಪರಮೇಷ್ಠಿಯ ಈ ಕೃತಿ ಬಹುಶಃ ಕನ್ನಡದಾಗಿದ್ದರೆ ೫೦೦ ವರ್ಷಗಳ ದೀರ್ಘಕಾಲದ ಈ ಅಂತರದಲ್ಲಿ ಈ ವಿಷಯ ಕುರಿತು ಬರೆಯುವ ಮನೋಧರ್ಮವಾಗಲಿ ಅಥವಾ ಪರಿಕಲ್ಪನೆಯಾಗಲಿ ನಮ್ಮ ಕವಿಗಳಲ್ಲೇಕೆ ಬಲಗೊಳ್ಳಲಿಲ್ಲ? ಎಂಬುದು ಕುತೂಹಲದ ಪ್ರಶ್ನೆ. ಏನೇ ಆದರೂ ಈ ಗದ್ಯ ಕೃತಿ ಜಿನಸೇನನಿಗೆ,ಆಧಾರ ಗ್ರಂಥವಾಗಿಯೂ,ಚಾವುಂಡರಾಯ ಪುರಾಣಕ್ಕೆ ಸ್ಫೂರ್ತಿ ನೀಡಿದ ಕೃತಿಯಾಗಿಯೂ ಗಮನ ಸೆಳೆಯುತ್ತದೆ. ಇದೇ ಹೊತ್ತಿಗೆ ಅಂದರೆ ಕ್ರಿ.ಶ.೧೦ನೆಯ ಶತಮಾನದ ಹೊತ್ತಿಗೆ ಕನ್ನಡೇತರವಾದ ಎರಡು ಕೃತಿಗಳು ರೂಪಗೊಂಡವು.ಅಪಭ್ರಂಶದಲ್ಲಿ ಪುಷ್ಪದಂತನೆಂಬ ಕವಿ ೬೩ ಶಲಾಕ ಪುರುಷರ ವಿಷಯ ಕುರಿತು `ಮಹಾಪುರುಷ'ವೆಂಬ ಕೃತಿಯನ್ನು ರಚಿಸಿದ ಮತ್ತು ೧೨ನೆಯ ಶತಮಾನದ ಗುರ್ಜರ ಚಾಲುಕ್ಯರ ಆಸ್ಥಾನದಲ್ಲಿ ಮಹಾ ಪಂಡಿತನಾಗಿದ ಹೇಮಚಂದ್ರನೆಂಬ ಕವಿ ಸಂಸ್ಕೃತದಲ್ಲಿ`ತ್ರಿಷಷ್ಠಿ ಶಲಾಕ ಪುರುಷಗುಣಾಲಂಕಾರ'ವೆಂಬ ಮಹಾಕಾವ್ಯವನ್ನು ರಚಿಸಿದ್ದಾನೆ. ಬೇರೆ ರೂಪಗಳಿಗಿಂತ ತ್ರಿಷಷ್ಠಿ ಶಲಾಕ ಪುರುಷರ ಹಸ್ತಪ್ರತಿಗಳು ಅಧಿಕವಾಗಿ ನಿರ್ಮಾಣಗೊಂಡಿದ್ದು ಸಾಂಗತ್ಯ ರೂಪದಲ್ಲಿ ಬಹುಶಃ ಈ ಜನಪ್ರಿಯತೆಗೆ ಸಾಂಗತ್ಯದ ನಿರರ್ಗಳತೆ ಮತ್ತು ಗೇಯಗುಣಗಳೇ ಕಾರಣವಾಗಿರಬೇಕು. ಆದರೆ ಕ್ರಿ.ಶ.೧೮೨೯ರಲ್ಲಿ ಗದ್ಯರೂಪದಲ್ಲಿ ನಿರ್ಮಾಣವಾದ ಅಪರೂಪದ ಒಂದೇ ಹಸ್ತಪ್ರತಿ ಇದೆ. ಅದು ಸೂರಪಂಡಿತ ಕವಿಯತ್ರಿಷಷ್ಠಿ ಮಹಾಪುರುಷರ ಪುರಾಣ'.

ಆದಿ: ಶ್ರೀ ಸರ್ವಜ್ಞಾಯ ನಮಃ॥೧॥ ರಾವತ ಪಂಚಭರತ ಕ್ಷೇತ್ರದೊಳು ಕಾಲ
ತ್ರಯದೋಳು ಸಪ್ತತಿ ಶತಕರ್ಮ್ಮ ಭೂಮಿಯೊಳು ಕಾಲತ್ರಯದೋಳ್
ಕೈಕೇವ ಭಗವದರ್ಹತ್ಸಿದ್ದಾದಿ ಪಂಚಭೇದವನ್ನುಳ್ಳ ಸತತ ದೇವರುಗಳಂ

ಅಂತ್ಯ: ಇದು ಸಕಲಭುವನ ಜನ ಮಹದಾಶ್ರಯ ಶ್ರೀ ಮತ್ಪೃಥ್ವಿ ಪಾಲಕ ರಾಜಾಧಿ
ರಾಜ ಪರಮೇಶ್ವರ ಶ್ರೀವೀರ ಪ್ರೌಢ ಪ್ರತಾಪ ಮಹಿಸೂರ ನಗರದ ರತ
ಸಿಂಹಾಸನಾಲಂಕೃತ ಶ್ರೀ ಕೃಷ್ಣರಾಜಕಲ್ಪ ಪಾದಪಟ್ಟಮಯಾಶ್ರಮ ಶ್ರೀ
ಶೂರ ಪಂಡಿತಕಾಂತಮಪ್ಪ ತ್ರಿಷಷ್ಠಿ ಮಹಾಪುರುಷರ ಪುರಣ್ಯ ಪುರಾಣ
ಕಥ ಸಂಗ್ರಹದೊಳು ವರ್ಧಮಾನ ಸ್ವಾಮೀ ಕಥಾ ವರ್ನ್ನನಂ ಅಷ್ಟ
ತ್ರಿಂಶೊಧ್ಯಾಯತಿ ೩೮ಶ್ರೀ ಶ್ರೀ ಶತವರುಷ ೧೭೫೧ನೆಯ ವಿರೋಧಿ ಸಂವತ್ಸರದ ಮಾರ್ಗಶಿರ ಶುಬುದ
ವಾರ ಕನಕಗಿರಿ ಚೈತ್ಯಾಲೆಯ ಮಂಗಳ ಮಹಾ ಶ್ರೀ ಶ್ರೀ

ಜೈನ ಕವಿಗಳು ಕಾವ್ಯರಂಭದಲ್ಲಿ ಪಂಚಪರಮೇಷ್ಠಿಗಳನ್ನು ಪೂರ್ವ ಜೈನಾಚಾರ್ಯರನ್ನು ಹಾಗೂ ಪೂರ್ವ ಜಿನಕವಿಗಳನ್ನುಸ್ಮರಿಸುತ್ತಾ ತ್ರಿಷಷ್ಠಿ ಮಹಾಪುರುಷರ ಚರಿತ್ರೆಗೆ ತೊಡಗುತ್ತಾರೆಂಬುದಕ್ಕೆ ಈ ಹಸ್ತಪ್ರತಿ ವಿವರ ನೀಡುತ್ತದಲ್ಲದೆ, ಜೈನ ಹಸ್ತಪ್ರತಿಗಳು ಚೈತ್ಯಾಲಯ, ಬಸದಿಗಳಲ್ಲಿ ನಿರ್ಮಾಣವಾಗುವ ಬಹುಮುಖ್ಯ ಅಂಶವನ್ನು ಈ ಹಸ್ತಪ್ರತಿ ಸೂಚಿಸುತ್ತದೆ.

ಪಂಚಕಲ್ಯಾಣ

ಪಂಚಕಲ್ಯಾಣ ಭವಾವಳಿಯ ನಂತರ ಜೈನ ತೀರ್ಥಂಕರ ನಿರ್ವಹಿಸಬೇಕಾದ ದೈವಿಕ ಕರ್ತವ್ಯಗಳು. ಇವರಲ್ಲಿ ಮುಖ್ಯವಾಗಿ ಐದು ಘಟ್ಟಗಳಿವೆ. ಗರ್ಭಾವತರಣ, ಜನ್ಮಾಭಿಷೇಕ, ಪರಿನಿಷ್ಕ್ರಮಣ, ಕೇವಲಜ್ಞಾನಪ್ರಾಪ್ತಿ ಮತ್ತುಪರಿನಿರ್ವಾಣ.

ತೀರ್ಥಂಕರರಾಗಲು ಅರ್ಹತೆ ಹೊಂದಿದವರಿಗೆ ಮಾತ್ರ ನಡೆಯುವ ಕ್ರಿಯಾಚರಣೆಗಳೇ ಈ ಪಂಚಕಲ್ಯಾಣಗಳು. ಗರ್ಭದಿಂದ ಬಂದ ನಂತರ ಮೋಕ್ಷಕ್ಕೆ ಹೋಗುವ ವರೆಗೆ ನಡೆಯುವ ವಿಶೇಷ ಪ್ರಸಂಗಗಳನ್ನು ಸ್ವರ್ಗದೊಳಗಿನ ಇಂದ್ರರುಬಂದು ಪರಮೋತ್ಸವ ಮಾಡುತ್ತಾರೆಂದು ಜೈನರು ನಂಬಿದ್ದಾರೆ. ಇದು ಜೈನರಿಗೇ ವಿಶಿಷ್ಟವಾದ ಆಚರಣೆ. ರನ್ನನು ತನ್ನಅಜಿತನಾಥ ಪುರಾಣ ತಿಲಕದಲ್ಲಿ ಪಂಚಕಲ್ಯಾಣಗಳನ್ನು ಹೀಗೆ ವರ್ಣಿಸಿದ್ದಾನೆ.

ಉದ್ಧೃತ: ,ಎಂ.ರಾಮಕೃಷ್ಣ: ೯ಲಳರನ್ನ ಮತ್ತು ಆತನಕೃತಿಗಳು ೧೫೬
ಸುರಲೋಕಾವತರೋತ್ಸವಂ ಪರಿಕೃತಂ ಜನ್ಮಾಭಿಕ್ಷೇಕೋತ್ಸವಂ
ಪರಿನಿಷ್ಕ್ರಂತಿ ಮಹೋತ್ಸವಂ ಪ್ರವಿಮಲಂ ಕೈವಲ್ಯ ಬೋಧೋತ್ಸವಂ
ಪರಿನಿರ್ಮಾಣಮಹೋತ್ಸವಂ ಜಿನಕಲ್ಯಾಣಮಯ್ದುಂ ಸವಿ
ಸ್ವರದಿಂದಪೂರ್ವವು ವರ್ಣಕಂಗಳಿವಭವ್ಯಾಂಗಮೇನೊಪ್ಪದೇ"

(ಅಜಿತನಾಥಪುರಾಣ ೧.೯೫)

ಪಂಪ ರನ್ನರ ತರುವಾಯ ಮುಂದೆ ಅನೇಕ ಕವಿಗಳು ವಿವಿಧ ರೂಪಗಳಲ್ಲಿ ಈ ವಿಷಯವನ್ನು ಕೇಂದ್ರವಾಗಿಟ್ಟುಕೊಂಡು ಹಸ್ತಪ್ರತಿಗಳನ್ನು ರಚಿಸಿದ್ದಾರೆ. ವಿಶೇಷವೆಂದರೆ ಈಗಾಗಲೇ ಸ್ಥಾಪಿತಗೊಂಡ ರೂಪಗಳಿಗಿಂತಭಿನ್ನವಾದ ದೃಶ್ಯಮಾಧ್ಯಮದ ಅಭಿನಯ ರೂಪದ ಯಕ್ಷಗಾನದಲ್ಲಿ ಪಂಚಕಲ್ಯಾಣವನ್ನು ವಿವರಿಸುವ ಪ್ರಯತ್ನಗಳು ಕೂಡಾ ನಡೆದವು.

'ಪಂಚಕಲ್ಯಾಣ ವೆಂಬ'[೧೫] ಹಸ್ತಪ್ರತಿಯನ್ನು ಅದರ ಸ್ವರೂಪವನ್ನು ಗಮನಿಸಬಹುದು.

ಆದಿ: ಶ್ರೀ ಮತ್ಪಂಚಕಲ್ಯಾಣನಾಥಾಯ ನಮಃ
ಶ್ರೀ ಮತ್ಪಾರ್ಶ್ವನಾಥ ಸ್ವಾಮಿಯವರ ಪಂಚಕಲ್ಯಾಣ ಬರೆಯುವದಕ್ಕೆ
ನಿರಂತರಾಯೇಸ್ತು

ಅಂತ್ಯ: ಸೋವಂಶಜನಿಗೆ ಭೂಮಿ ಪಾಲಕನಿಗೆ
ಪ್ರೇಮದಿಂ ಸರ್ವ್ವರ ಪೊರೆದವರಿಗೆ
ಸ್ವಾಮಿ ಪಾರ್ಶ್ವೇಶನ ಯಕ್ಷಿ ಪ್ರಸನ್ನಂಗೆ
ಕೋಮಲಾಂಗಿಯರಾರತಿಯೆತ್ತಿರೆ ಮಂಗಳ

ಈ ಹಸ್ತಪ್ರತಿಯ ಭಾಷೆ ಈ ಹೊತ್ತು ಗ್ರಾಮೀಣ ಪ್ರದೇಶದಲ್ಲಿ ಪ್ರಯೋಗೊಳ್ಳುವ ಬಯಲಾಟದ ಭಾಷೆಯಂತೆ ವ್ಯಕ್ತ ವಾಗುತ್ತದೆ. ಹಾಗೆಯೇ ಪದ್ಯ ರೂಪದಲ್ಲಿ ಕೂಡಾ ರೂಪಗೊಂಡ ಹಸ್ತಪ್ರತಿಗಳು ನಿರ್ಮಾಣವಾಗಿವೆ. ಉದಾ: ಚಂದ್ರಪ್ರಭ ತೀರ್ಥಂಕರ ಪಂಚಕಲ್ಯಾಣವನ್ನು ವಿವರಿಸುವ 'ಪಂಚಕಲ್ಯಾಣ'[೧೬] ವೆಂಬ ಹಸ್ತಪ್ರತಿಯ ಸ್ವರೂಪವನ್ನು ಗಮನಿಸಬಹುದು. ಈ ಕವಿಗಳಲ್ಲದೆ ಪ್ರಮುಖ ಕವಿಗಳಾದ ಬ್ರಹ್ಮಶಿವ,ಮಾಘಣಂದಿ, ವಿಜಯಣ್ಣ, ನೇಮಣ್ಣ, ಮುಂತಾದವರು ಈ ವಿಷಯದಲ್ಲಿ ಅನೇಕ ಪ್ರಯೋಗಗಳನ್ನು ಜಾರಿಗೊಳಿಸಿದ್ದಾರೆ.

ಲೌಕಿಕ

ರಾಮಾಯಣ, ಮಹಾಭಾರತ ಅಥವಾ ಪರಂಪರೆಯಿಂದ ಜನರಲ್ಲಿ ನಡೆದು ಬಂದ ದಂತಕಥೆಗಳನ್ನು ಆಧರಿಸಿ ಜೈನರು ಹಸ್ತಪ್ರತಿಗಳನ್ನು ಬರೆದರು. ಧಾರ್ಮಿಕ ವಿಷಯದಲ್ಲಿ ಕಲ್ಪನೆಯನ್ನು ಆಧರಿಸಿಯೇ ಹಸ್ತಪ್ರತಿಗಳು ಹುಟ್ಟಿದರೆ, ಲೌಕಿಕದಲ್ಲಿ ವಾಸ್ತವ ಬದುಕಿನ ಚಿತ್ರಣವೆ ಹಸ್ತಪ್ರತಿಗಳ ವಿಷಯವಾಯಿತು. ಅವರಿಗೆ ಧಾರ್ಮಿಕ ದೃಷ್ಟಿಗಿಂತಲೌಕಿಕ ದೃಷಿಯಲ್ಲೆ ಸೃಜನಶೀಲತೆಯನ್ನು ಕಂಡುಕೊಳ್ಳುವ ಹಂಬಲ ಉಂಟಾಗಿದ್ದರ ಹಿನ್ನೆಲೆಯಲ್ಲಿ ಧಾರ್ಮಿಕ ಕೃತಿಗಳಿಗಿಂತ ಲೌಕಿಕ ಕೃತಿಗಳೇ ಹೆಚ್ಚು ಆಕರ್ಷಕ ಮತ್ತು ಜನಪ್ರಿಯತೆ ಹೊಂದಿವೆ ''ಧರ್ಮ, ಕಾವ್ಯಧರ್ಮ''ಎಂಬ ಪರಿಭಾಷೆಗಳು ಕೂಡಾ ಧಾರ್ಮಿಕಗಿಂತ ಲೌಕಿಕ ಸ್ವರೂಪದ ಕಾವ್ಯಶಕ್ತಿ ಪ್ರಯೋಗವನ್ನು ಸಮರ್ಥಿಸುತ್ತವೆ.

ರಾಮಾಯಣ ಮಹಾಭಾರತದ ಘಟನೆಗಳು ಬಾಯಿಂದ ಬಾಯಿಗೆ ಹರಿದು ಬಂದ ಮೌಖಿಕ ಪರಂಪರೆಯ ಕಥೆಗಳು. ಹೇಗೆ ಜನಸಮುದಾಯಗಳು ಕಥಾ ನಿರ್ಮಿತಿಯ ವಿಧಾನದಲ್ಲಿ ತಮ್ಮ ಪ್ರತಿಭೆಯನ್ನು ತೊಡಗಿಸಿಕೊಂಡವೆಂಬುದನ್ನು ರಾಮಾಯಣ ಭಾರತ ಕಥೆಗಳ ಕಟ್ಟುವಿಕೆಯ ಸಂದರ್ಭದಲ್ಲಿ ತಿಳಿಯಬಹುದಾಗಿದೆ. ವಡ್ಡಾರಾಧನೆಯಂತ ಧಾರ್ಮಿಕ ಕಥೆಗಳ ರಚನೆಯಲ್ಲಿ ಜೈನರು ಬಹುಶಃ ಇದೇ ಮಾದರಿಯನ್ನು ಅನುಸರಿಸಿದ ಸಾಧ್ಯತೆಗಳಿವೆ. ಯಾಕೆಂದರೆ ವಡ್ಡಾರಾಧಾನೆಯಲ್ಲಿ ಗದ್ಯಕಥಾನಕಗಳು ಧಾರ್ಮಿಕವಾದರೂ ಕೆಲವೊಮ್ಮೆ ಜಾನಪದವೆನ್ನಬಹುದಾದ ಲೌಕಿಕ ಚಿತ್ರಣಗಳಿವೆ. ರಾಮಾಯಣ ಭಾರತದಂತ ವೈದಿಕ ಕಥೆಗಳು ಜನಮನವನ್ನು ಆವರಿಸಿ ವೈದಿಕಕ್ಕೆ ಪ್ರಭಾವಗೊಳಿಸಿದ ಸಂದರ್ಭದಲ್ಲಿ ಜೈನ ಕವಿಗಳು ಅದರಲ್ಲಿ ಆಗಮಿಕತೆಯನ್ನು ಕಂಡಿರಲಿಕ್ಕಿಲ್ಲ.

ಜೈನಕವಿಗಳು ತಮ್ಮ ಲೌಕಿಕ ಕೃತಿಗಳ ರಚನೆಯಲ್ಲಿ ಸಾಮಾಜಿಕ ಹಾಗೂ ಮಾನವೀಯ ಮೌಲ್ಯಗಳ ಧ್ಯೇಯಾದರ್ಶಗಳನ್ನು ಮಾದರಿಯಾಗಿಟ್ಟುಕೊಂಡರು. ಆದ್ದರಿಂದಲೇ ಅವರ ಧಾರ್ಮಿಕ ಕೃತಿಗಳು ದೇವರ ಬಗೆಗಿನಕಥೆಯಾದರೆ ಲೌಕಿಕ ಕೃತಿಗಳು ಮನುಷ್ಯರ ಕಥೆಯಾದವು. ಸುಳ್ಳು ಹೇಳುವದು, ಕಳ್ಳತನಮಾಡುವುದು ಮತ್ತೊಬ್ಬನಿಗೆ ಅನ್ಯಾಯ ಮಾಡುವದು, ಮುಂತಾದವುಗಳಿಂದ ವ್ಯಕ್ತಿಗೆ ಅಪಾಯವಿದೆಯೆಂಬುದನ್ನು ದೃಷ್ಟಾಂತಗಳಿಂದ ನಿರೂಪಿಸಿದರು. ಪಂಪಕವಿ ತನ್ನ ಕಾಲದ ಕರ್ನಾಟಕದಲ್ಲಿ ಜನಜೀವನವನ್ನು ಆಳವಾಗಿ ಹೊಕ್ಕಿದ್ದ ಸ್ವಾಭಿಮಾನ ಸಾಹಸ, ಸ್ವಾಮಿಭಕ್ತಿ, ಬೋಳವಾಳಿ, ವೇಳೆವಾಳಿ ಇತ್ಯಾದಿ ಸಾಮಾಜಿಕ ಮೌಲ್ಯಗಳನ್ನು ತನ್ನ ಕೃತಿಯ ಮೂಲಕ ಪ್ರತಿಪಾದಿಸಿದ. ಜನ್ನನನ್ನು ಹೊರತು ಪಡಿಸಿದರೆ ರನ್ನ,ಪೊನ್ನ ಮುಂತಾದವರು ಇದೇ ವಿನ್ಯಾಸದಲ್ಲಿ ಕೃತಿ ನಿರ್ಮಾಣ ಮಾಡಿದರು. ಮುಂದೇ ಇಂಥದೆ ವಸ್ತುವನ್ನುಳ್ಳ ಅನೇಕ ಹಸ್ತಪ್ರತಿಗಳು ಬೇರೆ ಬೇರೆ ರೂಪಗಳಲ್ಲಿ ನಿರೂಪಣೆಗೊಂಡವು. ಜೈನರು ಧಾರ್ಮಿಕ ಹಸ್ತಪ್ರತಿಗಳಿಗೆ ಅಹಿಂಸೆ, ಉಪವಾಸ, ಕಠಿಣ ತಪಸ್ಸು, ಬ್ರಹ್ಮಚರ್ಯದಂತ ಆಚರಣೆಗಳನ್ನು ಬಳಸಿಕೊಂಡರೆ ಸುಳ್ಳು. ಮೋಸ, ಕಳ್ಳತನ, ಪ್ರಭುತ್ವ, ಶೋಷಣೆಯಂತ ಸಾಮಾಜಿಕ ಸಮಸ್ಯೆಗಳು ಲೌಕಿಕ ಹಸ್ತಪ್ರತಿಗಳ ವಿಷಯವಾದವು.

ಅಡಿಟಿಪ್ಪಣಿಗಳು

೧ ಕೆ.೩೦೦ ಸಂ: ಎಚ್ ದೇವೀರಪ್ಪ:೧೯೬೨:ಮೈಸೂರು ಪ್ರಾಚ್ಯ ವಿದ್ಯಾಸಂಶೋಧನಾಲಯದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚೀ. ಸಂ:೨ ಪುಟ ೭೨

೨. ಕೆ. ಎ. ೨೦೯/೪: ಅದೇ ಸಂ:೩ ಪು ೩೭೦.

೩. ಕೆ.ಎ. ೩೦೨ ಅದೇ ಸಂ: ೧ ಪು ೪೩.

೪. ಕೆ.ಎ. ೮೯೪/೧ ಸಂ: ಬಿ.ಎಸ್ ಸಣ್ಣಯ್ಯ: ೧೯೮೦: ಕನ್ನಡ ಹಸ್ತಪ್ರತಿ ಸೂಚಿ ಮೈಸೂರು ವಿಶ್ವವಿದ್ಯಾಲಯ ಸಂ:೫ ಪು ೧೩೭.

೫. ಕೆ.ಎ. ೫೪೬ ಅದೇ ಸಂ:೬ ಪು ೧೦೯.

೬. ಕೆ.ಎ. ೨೦೪ ಸಂ: ಎಚ್. ದೇವೀರಪ್ಪ: ೧೯೬೨ ಮೈ.ಪ್ರಾ.ವಿ.ಸಂ ಸಂ:೧ ಪು:೪೮

೭. ಕೆ.ಎ. ೮೪/೧ ಅದೇ ಸಂ:೧ ಪು ೧೩೭.

೮. ಕೆ.ಎ. ೭೫೨ ಸಂ.ಬಿ.ಎಸ್ .ಸಣ್ಣಯ್ಯ: ೧೯೮೦ ಸಂ:೬ ಪು ೬

೯. ಕೆ. ೧೫೧೯ ಅದೇ ಸಂ:೬ ಪು ೫

೧೦.ಕೆ. ೧೨೮೬ ಅದೇ ಸಂ:೬ ಪು ೩೩೫

೧೧.ಕೆ. ೧೦೦ ಸಂ. ಎಸ್ ಶಿವಣ್ಣ ೧೯೮೨, ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ, ಸಂ:೧ ಪು:೪೬೬

೧೨.ಕೆ. ೭೫೯ ಸಂ. ಬಿ.ಎಸ್. ಸಣ್ಣಯ್ಯ ೧೯೮೦ ಸಂ:೬ ಪು ೪೦೨.

೧೩.``೬೩ ಶಲಾಕ ಪುರುಷರ ಚರಿತ್ರೆಗಳನ್ನು ಒಟ್ಟಿಗೆ ವಿವರಿಸುವ ಗ್ರಂಥಕ್ಕೆ ಮಹಾಪುರಾಣವೆಂತಲೂ. ಒಬ್ಬತೀರ್ಥಂಕರ ಚರಿತ್ರೆಯನ್ನು ಬೇರೆಯಾಗಿ ಹೇಳುವದಾದರೆ ಅದಕ್ಕೆ ಇತಿಹಾಸವೆನ್ನಬೇಕೆಂತಲೂ ಪ್ರಭಾಚಂದ್ರನೆಂಬ ಆಚಾರ್ಯಹೇಳುತ್ತಾನೆ. ಡಾ. ಸದಾನಂದ ನಾಯಕ: ಕನ್ನಡಸಾಹಿತ್ಯದಲ್ಲಿ ಜೈನಪುರಾಣಗಳು. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೪ ಪು ೮.

೧೪.ಕೆ. ೭೫೧ ಸಂ. ಬಿ.ಎಸ್ ಸಣ್ಣಯ್ಯ ೧೯೮೦ ಮೈ.ವಿ.ವಿ. ಸಂ:೬ ಪು ೨೦೬.

೧೫.ಕೆ. ಬಿ. ೫೩೨/೭ ಅದೇ ಸಂ:೬ ಪು ೪೧೦.

೧೬.ಕೆ. ೧೪೬೪/೨೭ ಅದೇ ಸಂ:೬ ಪು ೪೦೯.

ಬ) ವೀರಶೈವ ಧಾರ್ಮಿಕ ಹಸ್ತಪ್ರತಿಗಳು:

ಧರ್ಮ, ತತ್ವನೀತಿ; ಪಂಚಾಚಾರ್ಯರು; ಶಿವಭಕ್ತ, ಶಿವಶರಣರ ಚರಿತ್ರೆ, ೬೩ ಪುರಾತನರ ಚರಿತೆ; ಷಟಸ್ಥಲ-ಅಷ್ಟಾವರಣ ಪಂಚಾಚಾರ ಸಿದ್ಧಾಂತ:

ಮಧ್ಯಕಾಲೀನ ಕನ್ನಡ ಹಸ್ತಪ್ರತಿಗಳ ಚರಿತ್ರೆ ಎಂದರೆ ಅದು ವೀರಶೈವ ಹಸ್ತಪ್ರತಿ ಪರಂಪರೆಯ ಅಧ್ಯಯನವೇ ಆಗಿದೆ. ಕನ್ನಡಪಬೇರೆ ಬೇರೆ ಹಸ್ತಪ್ರತಿಗಳು ಬರಹ ಹಾಗೂ ವಿಷಯದ ಮೂಲಕವಾಗಿ ಗಮನ ಸೆಳೆದರೆ, ವೀರಶೈವಹಸ್ತಪ್ರತಿಗಳು ವಿಷಯ ವೈವಿಧ್ಯದ ಹಿನ್ನೆಲೆಯಲ್ಲಿ ವಿಶೇಷ ಗಮನ ಸೆಳೆಯುತ್ತವೆ. 'ಶ್ರೀ ಗುರು ಬಸವಲಿಂಗಾಯನಮಃ, ಶಂಭುಲಿಂಗವೇ ನಮಃ ಎಂದು ಆರಂಭವಾಗುವ ವೀರಶೈವ ಧಾರ್ಮಿಕ ಹಸ್ತಪ್ರತಿಗಳು ಸ್ಪಷ್ಟವಾಗಿ ದ್ರಾವಿಡ ನೆಲದಲ್ಲಿ ರೂಪಗೊಂಡವು. ರಾಚನಿಕ ವಿನ್ಯಾಸ ಹಾಗೂ ಕಲಾತ್ಮಕತೆಯ ದೃಷ್ಟಿಯಿಂದ ವೀರಶೈವ ಹಸ್ತಪ್ರತಿಗಳ ಮಹತ್ವವನ್ನು ಕಂಡುಕೊಳ್ಳವುದಾದರೆ ಭೀಮಕವಿಯ ಬಸವಪುರಾಣದ ಹಸ್ತಪ್ರತಿಯೊಂದರಲ್ಲಿ ಪ್ರತಿ ಪುಟವನ್ನು ವಿವಿಧವಿನ್ಯಾಸದ ಬಣ್ಣದ ಚೌಕಟ್ಟುಗಳಿಂದ ಅಲಂಕರಿಸಿರುವುದು ಶ್ಲಾಘನೀಯವಾಗಿದೆ. ಇದರ ಹೊರ ರಕ್ಷಣಾ ಹಲಗೆಗಳಮೇಲಿರುವ ವರ್ಣರಂಜಿತ ಚಿತ್ರಗಳು ಸುಂದರವಾಗಿವೆ. "ರಾಘವಾಂಕ ಚರಿತೆಯ ಒಂದು ಕಾಗದ ಪ್ರತಿಯಲ್ಲಿ ಪ್ರಭುದೇವ,ಸಿದ್ಧರಾಮ, ರಾಘವಾಂಕ,ಹರಿಹರ; ಚಿಕ್ಕನಂಜಾರ್ಯ, ಚೆನ್ನ ವೀರಾಂಬಿಕೆ, ಮಹಾದೇವ-ರುದ್ರಾಣಿ, ಮೂರು ಮಂದಿ(ಏಕ, ದ್ವಿ, ತ್ರಿದಂಡಿ) ಕವಿಗಳು, ಪ್ರತಾಪರುದ್ರ, ವಿರೂಪಾಕ್ಷ ಪಂಡಿತ, ಕೆರೆಯ ಪದ್ಮರಸರ ಚಿತ್ರಗಳಿವೆ"(ಎಂ.ಎಂ.ಕಲಬುರ್ಗಿ;೧೯೭೩;೩೬). ಇಂಥ ಅನೇಕ ಸುಂದರ ವಿನ್ಯಾಸದ ಹಸ್ತಪ್ರತಿಗಳು ವೀರಶೈವ ಧರ್ಮದಲ್ಲಿ ಲಭ್ಯವಾಗುತ್ತಿವೆಯಲ್ಲದೆ ಅವುಗಳ ಮೇಲೆ ನಂದಿ, ಶಿವಲಿಂಗ, ಶಿವ ಪಾರ್ವತಿ ಇತ್ಯಾದಿ ಚಿತ್ರಗಳನ್ನು ಬಿಡಿಸಿರುವುದು ಕಂಡುಬರುತ್ತದೆ.

ಹಸ್ತಪ್ರತಿಗಳ ಆಂತರಿಕ ಸ್ವರೂಪದಿಂದ ಅವುಗಳನ್ನು ಗಮನಿಸುವುದಾದರೆ ಜೈನ ಹಸ್ತಪ್ರತಿಗಳಿಗಿಂತ ವೀರಶೈವ ಹಸ್ತಪ್ರತಿಗಳಲ್ಲಿ ಸ್ಖಾಲಿತ್ಯದ ಪ್ರಮಾಣ ಹೆಚ್ಚು. ಯಾಕೆಂದರೆ ವೀರಶೈವ ಧರ್ಮದಲ್ಲಿ ಗುರು ಪರಂಪರೆಗೆ ಹೆಚ್ಚು ಮಹತ್ವಕೊಟ್ಟಿದ್ದರಿಂದ ಇಲ್ಲಿಯ ಒಂದು ಮೂಲ ಹಸ್ತಪ್ರತಿಗೆ ಅನೇಕ ಶಿಷ್ಯಂದಿರು ಪ್ರತಿ ಅಥವಾ ನಕಲು ಮಾಡುವುದರಮೂಲಕ ತಮ್ಮ ನಿಷ್ಠೆಯನ್ನು ತೋರುತ್ತಿದ್ದರು. ಹೀಗಾಗಿ ಇಲ್ಲಿ ಕವಿಯ ಏಕೈಕ ಹಸ್ತಪ್ರತಿಗಿಂತ ಅದರ ವಂಶಸ್ಥಪ್ರತಿಗಳೇ ಬಹು ಪ್ರಮಾಣದಲ್ಲಿ ದೊರೆಯುತ್ತವೆ. ಆದರೆ ಈ ಬಗೆಯ ಸ್ಖಾಲಿತ್ಯದ ತಾಂತ್ರಿಕ ಸ್ವರೂಪ ಜೈನ ಮತ್ತುವೈದಿಕ ಪರಂಪರೆಯ ಹಸ್ತಪ್ರತಿಗಳಲ್ಲಿಲ್ಲ. ಜೈನರಿಗೂ ಕೂಡಾ ಶಿಷ್ಯ ಬಳಗವಿದ್ದರೂ ಅವರು ನಂಬಿದ್ದು ಜಿನನನ್ನು ಮಾತ್ರ. ಆದರೆ ಅತ್ತಿಮಬ್ಬೆ ಪೊನ್ನನ `ಶಾಂತಿಪುರಾಣ'ವನ್ನು ಸಾವಿರ ಪ್ರತಿಗಳಲ್ಲಿ ಬರೆಸಿ ಹಂಚಿದಾಗ ಎಷ್ಟು ಜನ ಪ್ರತಿಕಾರರು ಯಾವ ಮನೋಧರ್ಮದಿಂದ ಪ್ರತಿ ಮಾಡಿದರೆಂಬುದು ಚರ್ಚಾಸ್ಪದ ಸಂಗತಿ. ಜಿನನ ನಂಬಿಕೆಯೇ ಕಾರಣವಾಗಿ ಜೈನರ ಹಸ್ತಪ್ರತಿಗಳಲ್ಲಿ ವಂಶಸ್ಥ ಪ್ರತಿಗಳಿಲ್ಲದೆ ಬಹುತೇಕ ಮೂಲ ಅಥವಾ ಏಕೈಕ ಹಸ್ತಪ್ರತಿಗಳೇ ಇರುವುದರಿಂದ ಅಲ್ಲಿ ಸ್ಖಾಲಿತ್ಯದ ಪ್ರಮಾಣ ಇಲ್ಲವೆನ್ನುವಷ್ಟು ಕಡಿಮೆ. ಈ ದೃಷ್ಟಿಯಿಂದ ಮೂಡಬಿದ್ರೆಯ ಜೈನ ಹಸ್ತಪ್ರತಿ ಭಂಡಾರದಲ್ಲಿ ರಕ್ಷಿತವಾಗಿರುವ ಧವಲ, ಜಯಧವಳ, ಮಹಾಧವಳ ಹಸ್ತಪ್ರತಿಗಳು ಏಕೈಕ ಹಸ್ತಪ್ರತಿಗಳಾಗಿ ಗಮನ ಸೆಳೆಯುತ್ತವೆ.

ವೀರಶೈವ ಹಸ್ತಪ್ರತಿಗಳಿಗೆ ವಚನ ಕ್ರಾಂತಿಯ ಈ ನೆಲವೇ ಭೂಮಿಕೆಯಾಗಿದ್ದು ಮತ್ತು ದಕ್ಷಿಣ ಭಾರತದ ೬೩ ಶೈವಪುರಾತನರನ್ನು ಕುರಿತು ಹೇಳುವ ಸಂದರ್ಭದಲ್ಲಿ ಅವುಗಳಿಗೆ ಹಿಂದೆ ಹೇಳಿದಂತೆ ದ್ರಾವಿಡ ಸಂಸ್ಕೃತಿಯೇ ಆಕರವಾಗಿದ್ದುಬಹು ಮುಖ್ಯ ಸಂಗತಿಗಳು. ಹೆಸರಿಲ್ಲದ ಕವಿಯೊಬ್ಬನ ಗದ್ಯ ರೂಪದ `ಅರುವತ್ತು ಮೂರು ಪುರಾತನರ

ಚರಿತ್ರೆ'' ಹಸ್ತಪ್ರತಿ ಈ ಸಂಗತಿಯನ್ನು ಸ್ಪಷ್ಟವಾಗಿ ದಾಖಲಿಸುತ್ತದೆ. ಅದರ ಸ್ವರೂಪ ಹೀಗಿದೆ.

ಆದಿ: "೬೩ ಪುರಾತನರ ಚಾರಿತ್ರವಂನ್ನು ದ್ರಾವಿಡ ಪುರಾಣರಿತ್ಯ ಬರದಿದೆ.
ನಾಮಂ ತಿರುನೀಲಕಂಠರು ಗ್ರಾಮ -ಚಿದಂಬರ ಆಚರ-ಲಿಂಗಪುಜಾಣ
ಆಶ್ರಮ ಗ್ರಹಸ್ಥ ಭಕ್ತರು-ಜಂಗಮಭಕ್ತ ಕುಲ-ಕುಲಾಲನು ಮಾಸ
ಪುಶ್ಯಾ ಕ್ಷೆ------ ದೇಶ್ಯ ಶಿವನಾಹೆಯಿಡೆ ತನ್ನ----ತ್ತೆ ಯಾನು
ತೊರೆದು ಶ್ರೆಂಬುವಿ ನಕ್ರು ಪೆವಡಿದ.-ತಿರುನೀಲಕಂಠರ್ಗೆ ಸವೆಯದೊಲವಿಂ
--------ಶರ------ನಿಜಗುಣರ ೧೦ ಪದ್ಯದವುದ----ಣೇ

ಈ ಹಸ್ತಪ್ರತಿ ಪುರಾತನರಲ್ಲಿ ಒಬ್ಬನಾದ ತಿರುನೀಲಕಂಠರ ಬಗ್ಗೆ ವಿವರಿಸುತ್ತದೆ. ಆತನ ಗ್ರಾಮ, ಕುಲ, ದೇಶ,ಜೀವನ, ಕ್ರಮಗಳನ್ನು ಖಚಿತವಾಗಿ ದಾಖಲಿಸುತ್ತದೆ.

ವೀರಶೈವ ಸಂದರ್ಭದಲ್ಲಿ ಒಂದು ಮೂಲ ಪ್ರತಿಯನ್ನು ನಕಲುಗೊಳಿಸಿದ ಪ್ರತಿಕಾರನ ಕಾರಣ ಮತ್ತು ಮನೋಧರ್ಮವನ್ನಲ್ಲದೆ ಪ್ರತಿಯನ್ನು ಬರೆದು ಮುಗಿಸಿದ ಕಾಲ ಇತ್ಯಾದಿ ವಿವರಗಳನ್ನು ಮತ್ತು ಲಿಪಿಕಾರನ ವಂಶಾವಳಿಯನ್ನು ತಿಳಿಸುವ ಹಸ್ತಪ್ರತಿಗಳಿವೆ. ಉದಾ: ಕ್ರಿ.ಶ.೧೬೭೯ ರಲ್ಲಿ ಸಾಂಗತ್ಯ ರೂಪದಲ್ಲಿ ಪ್ರಕಟಗೊಂಡಉತ್ತರ ದೇಶದ ಬಸವಲಿಂಗ ಕವಿಯ ಭೈರವೇಶ್ವರ ಕಾವ್ಯದ ಕಥಾಸಾಗರ' ಹಸ್ತಪ್ರತಿಯ ಅಂತ್ಯ ಭಾಗದಲ್ಲಿ ಈ ವಿಷಯ ನಿರೂಪಿತವಾಗಿದೆ.

ಅಂತ್ಯ: ಯಿಲ್ಲಿಗೆ ಭೈರವೇಶ್ವರನ ಕಾವ್ಯದ ಕಥಾಸಾಗರವು ಸಂಪೂರ್ಣಮಂಗಳ ಮಹಾ ಶ್ರೀ----ಯಿ
ಬಸವಪುರಾಣದ ಕಥಾಸಾಗರವು ಮುಗಿದುದುದಿನವದುಯೆಂದರೆ ಯಿನ್ನವ ಶಾಲಿವಾಹನ ಸಟೆ
೧೮೧೮ ದುರ್ಮುತಿ ನಾಮಸಂವತ್ಸರ ಶ್ರಾವಣ ಶುದ್ಧ ೧ ಚಂದ್ರವಾರ ದಿನ ಮುಗಿದಿರುತ್ತದೆ . ಯಿ
ಪುಸ್ತಕ ಬರದವರಾರೆಂದರೆ ಅಗ್ಗಣಿ ಹಿರೇಮಠಕ್ಕೆ ಕಾರಣಕರ್ತುಗಳಾದ ಶಾಂತವಿರಚರಮೂರ್ತಿಗಳು
ಬರೆದುಯಿದ್ದರ ಪ್ರತಿಪೆರಪ್ಪೆ ಸಜ್ಜನ ಯಿತನಲ್ಲಿದು ತಂದು ಬರೆದಿದ್ದೇವೆ ಬಲ್ಲವರು ತಿದ್ದುವೊದುವದು
ಶ್ರೀ ಶ್ರೀ...........

ಈ ಹಸ್ತಪ್ರತಿ ಬರಹಗೊಂಡ ಮುಕ್ತಾಯದ ದಿನವನ್ನು, ಬರೆದವರನ್ನು ವಿವರಿಸುತ್ತದೆ. `ಮರುಳ ಸಿದ್ದೇಶ್ವರ ಚಾರಿತ್ರ''ವೆಂಬ ಇನ್ನೊಂದು ಹಸ್ತಪ್ರತಿಯಲ್ಲಿ ಪ್ರತಿಮಾಡಿದ ಕಾರಣವನ್ನು ತಿಳಿಸಲಾಗಿದೆ. ಹಸ್ತಪ್ರತಿಯ ಅಂತ್ಯ ಭಾಗದಲ್ಲಿರುವ ಈ ವಿವರದ ಸ್ವರೂಪ ಹೀಗಿದೆ.

ಅಂತ್ಯ: ವೋಬಳಾಪುರದ ತೆಲುಗ ಜಾಳ ಮರಿಸಿದ್ದಪ್ಪನವರಿಗೆ ಮಹಾಗುರು ಪುತ್ರನಾದ
ಮಾಯಿಕೊಂಡದ ವೊಂದಿ ಸೊಲಿಂಗನು ಪುತ್ರ ಪೌತ್ರ ಸಕಲ ಸಾಮ್ರಾಜ್ಯಭಿ
ವೃದ್ಧಿಯಾಗಲೆಂದು ಶ್ರೀ ಗುರು ಸಿದ್ದಲಿಂಗನ ಕೃಪಾಕಟಾಕ್ಷದಿಂ ಹರಸಿ ಬರೆದು
ಕೊಟ್ಟ ಮರುಳಚಾರಿತ್ರಕ್ಕೆ ಶುಭಮಸ್ತು ಶ್ರೀ

ಕ್ರಿ.ಶ. ೧೫೮೭ ರಲ್ಲಿ ದೇವ ಕವಿಯಿಂದ ರಚಿತವಾದ ಈ ಹಸ್ತಪ್ರತಿ ಕಂದ, ಪಾರ್ಥಿಕ ಪಟ್ಟದಿ ರೂಪಗಳಿಂದ ವೈವಿಧ್ಯ ಪಡೆದುಕೊಂಡಿದೆ. ತನ್ನ ವಂಶಾವಳಿ ವೃದ್ಧಿಯಾಗಲು ಮತ್ತು ಅಪಾರ ಸಂಪತ್ತು, ಸಾಮ್ರಾಜ್ಯ ಲಭಿಸುವ ಪ್ರತಿಕಾರನ ಮನೋಧರ್ಮ ಇಲ್ಲಿ ಅಭಿವ್ಯಕ್ತಗೊಂಡಿದೆ.

ಇನ್ನು ಕೆಲವು ಹಸ್ತಪ್ರತಿಗಳು ಲಿಪಿಕಾರನ ವಂಶಾವಳಿಯನ್ನು ದಾಖಲಿಸುವುದರ ಮೂಲಕ ಒಂದು ಚರಿತ್ರೆಯನ್ನು ಕಟ್ಟುವಲ್ಲಿ ನೆರವಾಗುತ್ತವೆ. ಕ್ರಿ.ಶ.೧೫೮೦ರಲ್ಲಿ ಪಾರ್ಥಿಕ ಪಟ್ಟದಿಯಲ್ಲಿ ಅದೃಶ್ಯ ಕವಿಯಿಂದ ನಿರ್ಮಾಣಗೊಂಡ 'ಪ್ರೌಢದೇವರಾಯನ ಕಾವ್ಯ' ಲಿಪಿಕಾರನ ವಂಶಾವಳಿಯನ್ನು ತಿಳಿಸುವ ಅಪರೂಪದ ಹಸ್ತಪ್ರತಿಯಾಗಿದೆ. ಅಂತ್ಯಭಾಗದ ಆರಂಭಕ್ಕೆ ವೀರಶೈವ ಶಾಸನಗಳಂತೆ ಆರಂಭವಾಗುವ ಈ ಹಸ್ತಪ್ರತಿ ಶಾಸನಗಳಿಗೂ ಮತ್ತು ಹಸ್ತಪ್ರತಿಗಳಿಗೂ ಇರುವ ಸಂಬಂಧದ ಕಡೆಗೆ ಗಮನ ಸೆಳೆಯುವ ವಿಶಿಷ್ಟ ಮಾದರಿಯ ಆಕರವಾಗುತ್ತದೆ. ವಂಶಾವಳಿಯನ್ನು ಕುರಿತು ಹೇಳುವ ಇದರ ಸ್ವರೂಪ ಹೀಗಿದೆ.

ಅಂತ್ಯ: "ನಮಸ್ತುಂಗ ಶಿರಶ್ಚುಂಬಿ ಛತ್ರ ಚಾಮರ ಚಾರವೆ
ತ್ರೈಲೋಕ್ಯನಗರಾರಂಭ-ಮೂಲಸ್ತಂಭಾಯ ಶಾಂಭವ
ಸ್ವ ಶ್ರೀ ಜಯಾಭ್ಯುದಯ ನೃಪಶಾಲಿವಾಹನ ಶಖವರುಷ ೧೭೫೩ಕರ ಸಂವತ್ಸರದ ಆಶ್ವಿಜ ಶುದ್ಧ ೧೦ ರವಿವಾರದಲ್ಲಿ ಉದಯ ಧನಿಷ್ಠಾ ನಕ್ಷತ್ರದಲ್ಲಿ ಪ್ರಭುಢರಾಯನ ಕಾವ್ಯ ಮುಗಿಯಿತು
ಬರದವರಾರೆಂದರೆ ಆಂದೂರಮಾ ಕಟ್ಟಿಮನಿ ತೆವರಮೆಳಿಹಳ್ಳಿ ಮಠಕ್ಕೆ ಕಾರಣ ಕರ್ತುಗಳಾದಂತ್ತ
ಕಂತೆ ವಡೆಯರನೂ ಪುತ್ರನಾದಂತ ಚಂನಬಸಪ್ಪದೇವರ ಪುತ್ರನಾದಂತ ವಿರೂಪಾಕ್ಷಯನ್ನು ಸ್ವಹಸ್ತ
ದಿಂದೆ ಬರದ ಬರಹಯಿಂತಿ ಮಂಗಳ ಮಹಃ ತಮಗೆ ಪ್ರೀತಿಯಿಂದ ಓದಕೊಳ್ಳಲಿಕ್ಕೆ ಬರಕೊಂಡಿದ್ದಾ
ಪುಸ್ತಕವು".

ಹಸ್ತಪ್ರತಿಯಲ್ಲಿ ಉಲ್ಲೇಖಗೊಂಡಿರುವ ವಂಶಾವಳಿ ಹೀಗಿದೆ.

ಆಂದೂರಮಾ ಕಟ್ಟಿಮನಿ ತೆವರಮೆಳಿಹಳ್ಳಿ ಮಠಕ್ಕೆ ಕಾರಣ ಕರ್ತರು

ಕಂತೆ ವಡೆಯರು
|
ಪುತ್ರ ಚನ್ನಬಸಪ್ಪ
|
ಪುತ್ರ ವಿರೂಪಾಕ್ಷಯ್ಯ

ಇಲ್ಲಿ ಉಲ್ಲೇಖಗೊಂಡಿರುವ ತೆವರಮೆಳಿಹಳ್ಳಿ ಎಂಬ ಊರು ತೆವರಮೆಹಳ್ಳಿಯಾಗಿದ್ದು ಈಗಿನ ಧಾರವಾಡ ಜಿಲ್ಲೆಯ ಸವಣೂರ ತಾಲೂಕಿನಲ್ಲಿದೆ. ಹಸ್ತಪ್ರತಿಯಲ್ಲಿಯ 'ಪ್ರಭುಢದೇವರಾಯ' ಎಂಬ ಶಬ್ದ ದ್ರಾವಿಡ ಭಾಷಾ ವೈಶಿಷ್ಟ್ಯದ ವ>ಪ>ಬ ಸ್ವರೂಪದಿಂದ ಗಮನ ಸೆಳೆಯುತ್ತದೆ.

ಈ ಮೇಲಿನ ಒಟ್ಟು ಸ್ವರೂಪದಿಂದ ವೀರಶೈವ ಹಸ್ತಪ್ರತಿಗಳು ಸಾಮಾನ್ಯವಾಗಿ ಎಲ್ಲ ಬಗೆಯ ಹಸ್ತಪ್ರತಿಗಳಂತೆ ಆದಿಅಂತ್ಯ ವೆಂಬ ವಿನ್ಯಾಸದಲ್ಲಿ ರಚಿತಗೊಂಡಿವೆ. ಆದಿ ಭಾಗದಲ್ಲಿ "ಶ್ರೀ ಗುರುಬಸವಲಿಂಗಾಯ ನಮಃ" ಎನ್ನುವ ಸೂತ್ರದೊಂದಿಗೆ ಆರಂಭವಾಗಿ ತಮಗಿಷ್ಟವಾದ ದೇವರ ನಾಮಾವಳಿ ಕವಿ ವಂಶವನ್ನು ನೆನೆಯುತ್ತಾರೆ. ಮಧ್ಯಭಾಗದಲ್ಲಿ

ವಿಷಯ ಸ್ವರೂಪ ನಿರೂಪಿತವಾಗಿರುತ್ತದೆ. ಅಂತ್ಯ ಭಾಗದಲ್ಲಿ ಹಸ್ತಪ್ರತಿಯನ್ನು ಪ್ರತಿ ಮಾಡಿದ ಕಾಲ, ಮುಕ್ತಾಯ ಇತ್ಯಾದಿಗಳ ವಿವರವಿರುತ್ತದೆ. ಮೂಲ ಹಸ್ತಪ್ರತಿಯೊಂದನ್ನು ಅನೇಕ ಪ್ರತಿಕಾರರು ನಕಲು ಮಾಡುವುದರಿಂದ ಸ್ಖಾಲಿತ್ಯದ ಪ್ರಮಾಣ ಅಧಿಕವಾಗಿದೆ. ಆಯಾ ಪ್ರತಿಕಾರರು ತಾವು ನಂಬಿದ ನೆಚ್ಚಿದ ದಾನಧರ್ಮಗಳನ್ನು ಕೂಡಾ ನೆನೆಯುತ್ತಾರೆ. ಇದು ವೀರಶೈವ ಹಸ್ತಪ್ರತಿಗಳ ಒಟ್ಟು ಸ್ವರೂಪ.

ವೀರಶೈವ ಧರ್ಮದ ಒಟ್ಟು ಸಂಸ್ಕೃತಿಯನ್ನು ನಿರೂಪಿಸುವ ಹಸ್ತಪ್ರತಿಗಳು ಧರ್ಮ, ತತ್ವ, ನೀತಿ, ಪಂಚಾಚಾರಶಿವಲೀಲೆ ಶಿವಭಕ್ತರ, ಶಿವಶರಣರ ಚರಿತೆ, ಷಟಸ್ಥಲ, ಅಷ್ಟಾವರಣ, ೬೩ ಪುರಾತನರ ಚರಿತೆ ಮುಂತಾದ ವಿಷಯ ಸಾಮಗ್ರಿ ಮತ್ತು ರೂಪ ವೈವಿಧ್ಯದ ಹಿನ್ನೆಲೆಯಲ್ಲಿ ರೂಪಿತಗೊಂಡಿವೆ. ನಿರೂಪಣೆಯ ಕ್ರಮ ವಿಭಿನ್ನ ಹಾಗೂ ವೈವಿಧ್ಯವಾದರೂ ಅವು ತಲುಪುವ ಕೊನೆಯ ಹಂತ ಶೂನ್ಯ ಅಥವಾ ಬಯಲಿನತ್ತ. ಜೈನರಲ್ಲಿ 'ಕೇವಲ ಜ್ಞಾನ'ದಂತೆ ವೀರಶೈವರಲ್ಲಿ `ಬಯಲು' ಪರಿಭಾಷೆ ಬಳಕೆಯಲ್ಲಿದೆ. ಈ ಕಾರಣದಿಂದ ವೀರಶೈವ ಧಾರ್ಮಿಕ ಹಸ್ತಪ್ರತಿಗಳು ಜೈನ ಪರಂಪರೆಗಿಂತ ಬೇರೆಯಾದ ಧಾರ್ಮಿಕ ಮೌಲ್ಯದತ್ತ ಸಾಗುತ್ತವೆ. ಇಲ್ಲಿ ಜೈನರಂತೆ ಕಠಿಣ ಆಚರಣೆಗಳಿಲ್ಲ, ಪಾಪಕರ್ಮಗಳ ಕರ್ಮಾಚರಣೆಯಿಲ್ಲ, ಉಪಾವಾಸಾದಿ ಅಹಿಂಸೆ, ಭವಾವಳಿಗಳ ಬಿಗಿ ಬಂಧನವಿಲ್ಲ. ಸಾಮಾನ್ಯವಾಗಿರುವ ಸಾಮಾಜಿಕ ಬದುಕಿನ ಕ್ರಮದಿಂದಾಗಿ ಮೋಕ್ಷ ಪಡೆಯುವ ಹಂಬಲವನ್ನು ವೀರಶೈವ ಹಸ್ತಪ್ರತಿಗಳು ಪ್ರಕಟಪಡಿಸುತ್ತವೆ.

ಮೇಲಿನ ವಿಷಯ ವೈವಿಧ್ಯಕ್ಕೆ ಈ ಹಸ್ತಪ್ರತಿಗಳು ಜೈನರ ಮಾರ್ಗ ರೂಪಗಳಿಗಿಂತ ಬೇರೆಯಾದ ದೇಸಿ ಮಾದರಿಗಳನ್ನು ಬಳಸಿಕೊಂಡವು. ಬಹುಶಃ ಅತ್ಯಂತ ಸರಳವಾದ ನೀತಿ ಬೋಧೆ ಮತ್ತು ಜೀವನಾಚರಣೆಗಳ ತತ್ವವನ್ನ ತಿಳಿಸಲು ತೀರಾ ಸರಳವಾದ ರೂಪಗಳನ್ನೆ ಬಳಸಿಕೊಂಡು ಹಸ್ತಪ್ರತಿ ನಿರ್ಮಾಣವಾಗಿವೆ. ಆಡುಭಾಷೆಯ ವಚನ, ಲಲಿತವಾಗಿ ಸಾಗುವ ರಗಳೆ, ರಾಗ ಬದ್ಧವಾದ ಸಾಂಗತ್ಯದಂತ ಹಾಡುಗಬ್ಬ, ಷಟ್ಪದಿ, ಶತಕ ಮುಂತಾದ ದೇಸಿ ಛಂದೋರೂಪಗಳು ವಿಷಯ ಸಂಪತ್ತನ್ನು ನಿರೂಪಿಸುವ ಭಾಷಾ ಮಾಧ್ಯಮಗಳಾದವು. ದೇಸಿ ಬದುಕಿನ ಅರ್ಥಮೌಲ್ಯವನ್ನು ಒಂದು ಸಮುದಾಯ ಹಾಗೂ ಜನಾಂಗದ ಕಾಳಜಿಯನ್ನು ಓದುಗ ವರ್ಗಕ್ಕೆ ತಲುಪಿಸುವ ಕಾರ್ಯದಲ್ಲಿ ಈ ರೂಪಗಳು ಕಿಂಕರತ್ವದ ಸಾರಥ್ಯವನ್ನು ವಹಿಸಿದವು.

**ಧರ್ಮ,ತತ್ವ, ನೀತಿ:**

ಒಂದು ಕಾಲಕ್ಕೆ ಸಾಹಿತ್ಯ ನಿರ್ಮಾಪಕರಾದ ಶರಣರು ಮುಂದಿನ ಹಲವು ನೂರು ವರ್ಷಗಳ ತರುವಾಯ ಅದೇವರ್ಗದ ಕವಿಗಳಿಗೆ ಸಾಹಿತ್ಯಿಕ ವಸ್ತುವಾದರು. ಮೊದಮೊದಲು ವೀರಶೈವ ಧರ್ಮ, ತತ್ವ, ನೀತಿಗಳ ಕುರಿತಾದ ಅಭಿವ್ಯಕ್ತಿಗೆ ಶರಣರೇ ಮೂಲ ಕಾರಣರಾದರು. ಇವರು ವಚನ ರೂಪದಲ್ಲಿ ಆ ಬಗೆಯ ವಿಷಯವನ್ನು ತಿಳಿಸುತ್ತಾ ಧಾರ್ಮಿಕ ಮೌಲ್ಯವನ್ನು ಜನರ ಬಳಿಗೆ ಕೊಂಡೊಯ್ದರು. ಆದ್ದರಿಂದ ವೀರಶೈವ ಹಸ್ತಪ್ರತಿಗಳನ್ನು ವಚನ ಮತ್ತು ವಚನೋತ್ತರ ಕಾಲಕ್ಕೆ ಮಿತಿಗೊಳಿಸಿ ಅಧ್ಯಯನ ಮಾಡಬೇಕಾದ ಅಗತ್ಯವಿದೆ. ವಚನ ಸಂದರ್ಭದಲ್ಲಿ ನಿರ್ಮಾಣಗೊಂಡ ಹಸ್ತಪ್ರತಿಗಳಿಗೆ ಸಾಂಸ್ಕೃತಿಕ ಸಂದರ್ಭವೊಂದರ ಕಾಳಜಿ ಹಾಗೂ ಸಮಾಜವಾದ ಸ್ಥಾಪನೆಯ ಜವಾಬ್ದಾರಿ ಇತ್ತು. ಧಾರ್ಮಿಕ, ಸಾಮಾಜಿಕ, ರಾಜಕೀಯ ಸಂಘರ್ಷದಲ್ಲಿ ರೂಪಗೊಂಡ ಈ ಹಸ್ತಪ್ರತಿಗಳ ಪ್ರಧಾನ ಉದ್ದೇಶ ವೀರಶೈವದ ಧರ್ಮ,ತತ್ವ, ನೀತಿಯ ಪ್ರಸಾರವಾಗಿತ್ತು. ಆದ್ದರಿಂದಲೇ ಬಹುತೇಕ ಹಸ್ತಪ್ರತಿಗಳು ಈ ವಿಷಯದ ಕ್ರಮಕ್ಕಾಗಿಯೇ ಸರಳ ಹಾಗೂ ಸತ್ವಯುತವಾದ ವಚನ ಮಾದರಿಯನ್ನು ಅನುಸರಿಸಿದವು. ಇಲ್ಲಿ ರೂಪ ಕೇಂದ್ರವಾಗಿ ಅದರ ಸುತ್ತಲೂ ವಿಷಯ ತನ್ನ ಪರಿವ್ಯಾಪ್ತಿಯನ್ನು ವಿಸ್ತರಿಸಿಕೊಂಡಿತು. ಜೈನ ಸಂದರ್ಭದಲ್ಲಿ ವಿಷಯ ಕೇಂದ್ರವಾಗಿ ರೂಪ ತನ್ನ ವೈವಿಧ್ಯತೆಯನ್ನು

ಗುರುತಿಸಿಕೊಂಡರೆ ಇಲ್ಲಿ ರೂಪ ಕೇಂದ್ರವಾಗಿ ವಿಷಯ ವೈವಿಧ್ಯತೆಗೊಳಪಟ್ಟಿತು. ವಚನ ರೂಪದಲ್ಲಿ ಏನೆಲ್ಲ ವಿಷಯಗಳು, ಎಷ್ಟು ಸಾಧ್ಯವೊ ಅಷ್ಟು ಬಗೆಯಲ್ಲಿ ಅವ್ಯಕ್ತಿಯನ್ನು ಪಡೆದವು. ಇಷ್ಟಾಗಿಯೂ ವಚನಕಾರರ ನಂತರ ಅಂದರೆ ಕ್ರಿ.ಶ.೧೫೮೦ರಲ್ಲಿ ಗುಮ್ಮಳಾಪುರದ ಸಿದ್ಧಲಿಂಗ ಕವಿಯ 'ಷಟ್ಸ್ಥಲ ಲಿಂಗಾಂಗ ಸಂಬಂಧದ ನಿರ್ವಚನ'[೫] ಹಸ್ತಪ್ರತಿ ವಚನರೂಪದಲ್ಲಿ ರಚಿತಗೊಂಡು ವೀರಶೈವ ಧರ್ಮವನ್ನು ನಿರೂಪಣೆಗೊಳಿಸುತ್ತದೆ.

ಆದಿ: "ಗುಂಮಳಾಪುರದ ಸಿದ್ಧಲಿಂಗ ದೇವರು ನಿರೂಪಿಸಿದ ಷಟ್ಸ್ಥಲ ಲಿಂಗಾಂಗ
ಸಂಬಂಧದ ನಿರ್ವಚನ॥

ಪ್ರಥಮದಲ್ಲಿ ನಾಮರೂಪ ಕ್ರೀ ಯೇನುಯೇನು ಇಲ್ಲದ ಮಹಾಘನ
ಶೂನ್ಯ ಬ್ರಹ್ಮಉ ಆಶೂನ್ಯ ಬ್ರಹ್ಮದಿಂದ ಶುದ್ಧ ಪ್ರಣಮ ಆಶುದ್ಧ
ಪ್ರಣಮದಿಂದ ಚಿತ್ರಭಾವದಕ್ಷರ ಆಚಿತ್ತು ಭಾವದಕ್ಷರದಿಂದ ಪರಶಕ್ತಿ,
ಆ ಪರಶಕ್ತಿಯಿಂದ ಅಕ್ಷರ ತ್ರಯಂಗಳು ಅಕ್ಷರ ತ್ರಯಂಗಳಿಂದ ಓಂಕಾರ
ಆ ಓಂಕಾರವೆ ಬಸವಂಣನು"

ಕ್ರಿ.ಶ. ೧೧೬೦ರಲ್ಲಿ 'ಹಡಪದ ಅಪ್ಪಣ್ಣಗಳ ವಚನ'[೬] ವೆಂಬ ಹಸ್ತಪ್ರತಿ ವಚನ ಮಾದರಿಯಲ್ಲಿ ವೀರಶೈವ ತತ್ವವನ್ನು ನಿರೂಪಿಸುವ ಹಸ್ತಪ್ರತಿಯಾಗಿದೆ.

ನೀತಿಯನ್ನು ನಿರೂಪಿಸುವ 'ಸಿದ್ಧನೀತಿ'[೭] ಯೆಂಬ ಹಸ್ತಪ್ರತಿ ಕಂದರೂಪದಲ್ಲಿ ರಚಿತವಾಗಿದೆ. ಅದು ಬೋಧಿಸುವ ನೀತಿಯ ಸ್ವರೂಪ ಹೀಗಿದೆ.

ಅಂತ್ಯ: ಕಾಣದೆ ನಾಡಲು ಸಲ್ಲದು
ಗಾಣವನಾಡುವನು ಮಡಿಯನುಡ ಸಲ್ಲದು
ಬಾಣತಿಯ ಕೂಟ ಸಲ್ಲದು
ಯೇಣಾಕ್ಷಿಯ ನಗಸ ಸಲ್ಲ ಶ್ರೀ ವಿಶ್ವಪತಿ॥ ೪೧॥

ಆದರೆ ಈ ಬಗೆಯ ಧೋರಣೆಯನ್ನು ವೀರಶೈವರು ತಮ್ಮ ಬದುಕಿನಲ್ಲಿ ಅನುಸಂಧಾನಗೊಳಿಸಿದರೆ ಎಂಬುದನ್ನು ಧರ್ಮತತ್ವ ನೀತಿಯ ಹೊರಗಿದ್ದುಕೊಂಡು ನೋಡಬೇಕಾಗಿದೆ.

ವೀರಶೈವ ತತ್ವವನ್ನು ಬೆಡಗಿನ ನುಡಿಗಳಲ್ಲಿ ಹೇಳುವ 'ಸ್ವರವಚನಗಳು'[೮] ಹಸ್ತಪ್ರತಿ ಅಪರೂಪವಾಗಿ ಸ್ವರವಚನದಲ್ಲಿ ರೂಪಗೊಂಡಿದೆ.

ಅಂತ್ಯ: ಬಯಲ ಬಾವಿಗೆ ನೀರಿಗೆ ಬಂದಳೊಬ್ಬಳು ನಾರಿ
ತಾ ಜಾರಿ ಬಿದ್ದಳು ತಂನ ಕೊಡ ನುಳಿಯ್ಯಿತ್ತು ನೋಡಾ ॥ಪ॥
ಕುರುಡ ಕಂಡನು ಹಾವ ಬರುತ ನಡುವಿರುಳೊಳು
ಮೂಗ ಹೇಳಿದ ಮತ್ತು ಕಿವುಡನ ಕಿವಿಗೇಳಿ
ಯಿರುಹೆ ಹಾರಿತ್ತು ಗಗನಕ್ಕೆ ಮರ ಮುರಿಯಿತ್ತು ಕೆಳಯಿಕ್ಕೆ
ಬೆಟ್ಟಕ್ಕೆ ಹತ್ತಿತ್ತು ಬೇಗೆ ಆರಿಗೆ ದೂರವೆನು ॥೧॥
ನೀರಿಲ್ಲದ ನೆಳಲಿಲ್ಲದ ಬೇರಿಲ್ಲದ ಮರಹುಟ್ಟಿ

ಹೂವಿಲ್ಲದೆ ಫಲಕೆ ಬಂದಿತೊ ನೋಡಮ್ಮ

ಕಣ್ಣಿಲದೆ ಕಾಲಿಲ್ಲದೆ ಕಾಯ್ವಿರ್ದರು ನಾಲ್ವರು

ಹೆಣ್ಣಿಗೆ ಮರುಳಾಯಿತ್ತು ಲೋಕ

ಕಂಚಿನ ಕರಡಿಗೆಯೊಳಗೆ ಕಂಬಿಯ ಕೇರಣೆಗಟ್ಟಿ

ನಿಂತಳು. ನಾಲ್ವರು

ಮಟ್ಟಿ ನಿರಾಕರಿ ಹೇಳುವದಾರಳವಲ್ಲ

ಕೇಳುವ ಪುರಷನೆ ಬಲ್ಲ ಯಿದ ಬಲ್ಲ"

ವಚನ ಪರಂಪರಯಲ್ಲೆ ಬೆಡಗಿನ ವಚನ ವಿಶಿಷ್ಟ ಮಾದರಿಯ ರೂಪವಾಗಿದ್ದು ಸಾಮಾನ್ಯವಾಗಿ ಯಾವುದು ವಿರೋಧವೊ ಅದನ್ನು ನಂಬಿಸುವ ಮಾದರಿಯಲ್ಲಿ ಮುನ್ನಡೆಯುತ್ತದೆ. ಈ ಹಸ್ತಪ್ರತಿಯಲ್ಲಿ ಕೂಡಾ ಬೆಡಗಿನರೂಪ ತನ್ನ ಮೂಲ ಸ್ವರೂಪವನ್ನುಳಿಸಿಕೊಂಡು ಬಳಕೆಯಾಗಿದೆ.

ಈ ಎಲ್ಲ ಹಸ್ತಪ್ರತಿಗಳ ಉದ್ದೇಶ ಸಾಮಾಜಿಕವಾದ ನೈತಿಕ ಮೌಲ್ಯಗಳನ್ನು ಪ್ರಸಾರ ಮಾಡುವ ಉದಾತ್ತ ಧ್ಯೇಯವೇ ಆಗಿತ್ತು. ವೀರಶೈವ ಧರ್ಮ, ತತ್ವ, ನೀತಿ ಮುಂತಾದ ವಿಷಯಗಳ ಅಭಿವ್ಯಕ್ತಿಗೆ ವಚನರೂಪ ಅಡಿಗಲ್ಲು ಹಾಕಿದ ತರುವಾಯವೇ ಇನ್ನುಳಿದ ಅನೇಕ ರೂಪಗಳು ಎಚ್ಚತ್ತು ಈ ವಿಷಯದ ನಿರೂಪಣೆಗೆ ತೊಡಗಿದವು. ಹೀಗಾಗಿ ರಗಳೆ, ಚಂಪೂ, ಸಾಂಗತ್ಯ, ಷಟ್ಪದಿ, ತ್ರಿವಿಧಿಗಳ ಇತಿಹಾಸ ಆರಂಭವಾಗುವುದು ವಚನೋತ್ತರ ಘಟ್ಟದ ನಂತರವೇ. ಒಂದು ಕಾಲಕ್ಕೆ "ರೂಪಗಳ ರಾಜನಾಗಿ ವಿರಾಜಮಾನವಾಗಿದ್ದ" ಚಂಪೂ ಕೂಡಾ ವೀರಶೈವ ಹಸ್ತಪ್ರತಿಗಳಲ್ಲಿ ಅವಕಾಶ ಪಡೆದದ್ದು ತಡವಾಗಿಯೇ.

ಪಂಚಾಚಾರ್ಯರು:

ಪಂಚಾಚಾರ್ಯರು ಯಾರು? ಇವರು ಕನ್ನಡಿಗರೆ? ಕನ್ನಡದಲ್ಲಿ ವಚನಗಳನ್ನು ರಚಿಸಿದ್ದಾರೆಯೆ? ಎಂಬ ಮುಂತಾದ ಪ್ರಶ್ನೆಗಳಿಗೆ ಉತ್ತರವಿಲ್ಲ. ಎಂ.ವಿ.ಸೀತಾರಾಮಯ್ಯನವರು ಹೇಳುವಂತೆ "ಬಸವಾದಿ ಶಿವಶರಣರು ವೀರಶೈವಧರ್ಮವನ್ನು ಕನ್ನಡ ವಚನಗಳಲ್ಲಿ ಪ್ರತಿಪಾದಿಸುವುದಕ್ಕೆ ಮುಂಚೆಯೇ ಪಂಚಾಚಾರ್ಯರು ವೀರಶೈವ ತತ್ವವನ್ನು ಪ್ರತಿಪಾದಿಸಿದ್ದಿರಬೇಕು ಎಂಬ ಅಭಿಪ್ರಾಯವುಂಟು." (೧೯೫೫;೨೬೫) ರೇವಣಸಿದ್ಧರು, ಮರುಳಸಿದ್ದರು, ಏಕೊರಾಮ, ವಿಶ್ವೇಶ್ವರರು, ಪಂಡಿತಾರಾಧ್ಯರು ಈ ಐವರು ಪಂಚಾಚಾರ್ಯರನ್ನು ಕುರಿತಂತೆ ಕನ್ನಡದಲ್ಲಿ ಕೆಲವೊಂದು ಹಸ್ತಪ್ರತಿಗಳು ರೂಪಗೊಂಡಿವೆ. ವೀರಶೈವ ಧರ್ಮಕ್ಕೆ ಬಲವಾದ ತಳಪಾಯವನ್ನು ನಿರ್ಮಿಸಿದ ಈ ಪಂಚಾಚಾರ್ಯರ ಬಗ್ಗೆ ಯಾಕೆ ವಿಪುಲವಾಗಿ ಹಸ್ತಪ್ರತಿಗಳು ನಿರ್ಮಾಣವಾಗಲಿಲ್ಲವೆಂಬುದು ಅಭ್ಯಾಸ ಯೋಗ್ಯ ಸಂಗತಿ. ಇವರು ಧರ್ಮ ಸ್ಥಾಪಕರಾಗಿದ್ದರೆ ಹೊರತು ಸಮಾಜ ಸುಧಾರಕರಾಗಿರಲಿಲ್ಲ.

ಧರ್ಮವನ್ನು ಜನಸಾಮಾನ್ಯರಿಗಾಗಿ ಸ್ಥಾಪಿಸದೆ ಒಂದು ಪಂಥದ ನಿರ್ಮಾಣಕ್ಕೆ ಅವರು ಬಳಸಿಕೊಂಡರು. ವಚನಕಾರರಂತೆವಿಚಾರವಾದಿಗಳಾಗಿರದ ಇವರು ಸಾಹಿತ್ಯದಿಂದ ದೂರ ಸರಿದು ಮಾರ್ಗ ಕವಿಗಳಂತೆ ಸಂಸ್ಕೃತಾಭಿಮಾನಿಗಳಾದರು. ಈ ಪ್ರಭಾವ ಎಷ್ಟು ಪ್ರಬಲವಾಯಿತೆಂದರೆ ಮುಂದೆ ಇವರ ಪಂಥದವರು ನಿರ್ಮಿಸಿದ ಪ್ರತಿಗಳು ಸಂಸ್ಕೃತವನ್ನೆ ಮಾಧ್ಯಮನ್ನಾಗಿಸಿಕೊಂಡವು. ಅದೃಷ್ಟವಶಾತ್ ಮುಂದಿನ ವಚನಕಾರರು ಈ ಮಾದರಿಯನ್ನು ಧಿಕ್ಕರಿಸಿ ಕನ್ನಡ ದೇಸಿ

ಬದುಕಿನೊಳಗೆ ಸೇರಿಹೋಗಿದ್ದರಿಂದ ಆ ನಂತರದ ಕನ್ನಡದಲ್ಲಿ ಆದ ಅಭಿವ್ಯಕ್ತಿ ಕ್ರಮಕ್ಕೆ ಒಂದು ವಿಚಿತ್ರ ಹಾಟ ನಿರ್ಮಾಣಗೊಂಡಿತು.

ಪಂಚಾಚಾರ್ಯರ ಕುರಿತಾಗಿ ಕನ್ನಡ ಕವಿಗಳು ಬರೆದ ಕೆಲವೊಂದು ಹಸ್ತಪ್ರತಿಗಳು ಲಭ್ಯವಾಗುತ್ತವೆ. ಇವರ ಕಾರ್ಯಕ್ಷೇತ್ರದ ಸ್ಥಾನಿಕ ಪರಂಪರೆಯನ್ನು ಈ ಹಸ್ತಪ್ರತಿಗಳು ದಾಖಲಿಸಿಕೊಡುತ್ತವೆ. ಕ್ರಿ.ಶ. ೧೫೮೭ರಲ್ಲಿ ವಾರ್ಧಕ ಷಟ್ಪದಿಯಲ್ಲಿ ರೂಪಗೊಂಡ ದೇವ ಕವಿಯ "ಮರುಳಸಿದ್ಧರ ಚಾರಿತ್ರ"[೯] ಹಸ್ತ ಪ್ರತಿಯ ಪರ್ತ ಸ್ವರೂಪ ಇಂತಿದೆ.
ಮರುಳಸಿದ್ದೇಶ್ವರ ಚಾರಿತ್ರ ಉಜ್ಜನಿ ಮರುಳಸಿದ್ದೇಶ್ವರ

ದೇವಯ್ಯನವರ ಶ್ರೀಪಾದ ಪದ್ಮಂಗಳೆ ಗತಿ  ಶಾಲಿವಾಹನ ಶಕ
ವರ್ಷಗಳು ೧೭೩೭ನೆಯ ನಾಮ ಸಂವತ್ಸರದ ಮಾರ್ಗಶಿರ
ಬ ೧೨ ಬುದವಾರ ಪ್ರಥಮಾರಂಭವಂ ಮಾಡಿ ಉಜ್ಜನಿ
ಮರುಳಸಿದ್ದೇಶ್ವರನ ಚಾರಿತ್ರವ ಬರೆಯುವದಕ್ಕೆ ಶುಭವಸ್ತು।।

ಈ ಹಸ್ತಪ್ರತಿ ಮರುಳಸಿದ್ದೇಶ್ವರನ ಉಜ್ಜನಿ ಪರಂಪರೆಯ ಬಗ್ಗೆ ವಿವರ ನೀಡುತ್ತದೆ. ಹಾಗೆಯೇ ರೇವಣಸಿದ್ಧರ ಬಗ್ಗೆವಿವರ ನೀಡುವ ಕೆಲಹಸ್ತಪ್ರತಿಗಳು ಷಟ್ಪದಿ ರೂಪದಲ್ಲಿ ರಚಿತವಾಗಿವೆ.ಮಲ್ಲಿಕವಿಯ"ರೇವಣಸಿದ್ದೇಶ್ವರ ಚಾರಿತ್ರ"[೧೦] ಮತ್ತು ಕ್ರಿ.ಶ. ೧೫೦೦ ರಲ್ಲಿ ಚತುರ್ಮುಖ ಬೊಮ್ಮರಸನ "ರೇವಣಸಿದ್ದೇಶ್ವರ ಪುರಾಣ"[೧೧] ಗಳೆರಡೂ ವಾರ್ಧಕ ಷಟ್ಪದಿಯಲ್ಲಿ ರೂಪಗೊಂಡ ಹಸ್ತಪ್ರತಿಗಳಾಗಿವೆ. ಈಗ ಪಂಚಾಚಾರ್ಯರನ್ನು ಕುರಿತ ಹಸ್ತಪ್ರತಿಗಳು ಲಭ್ಯವಾದರೆ ಅವರ ಬಗೆಗಿನ ಅಧ್ಯಯನ ಮುಂದುವರೆಯಬಹುದು. ಹಾಗೆಯೇ ಕೆಲವು ಹಳ್ಳಿಗಳಲ್ಲಿ ಮಳೆ ಬರಲೆಂದು ರೇವಣ ಸಾಂಗತ್ಯ ಓದಿಸುವ ಸಂಪ್ರದಾಯದ ಬಗ್ಗೆಯೂ ಅಧ್ಯಯನ ನಡೆಯಬೇಕಾಗಿದೆ.

**ಶಿವಭಕ್ತ: ಶಿವಶರಣ; ೬೩ ಪುರಾತನರ ಚರಿತೆ:**

ಜೈನರಲ್ಲಿ ತೀರ್ಥಂಕರರಿದ್ದಂತೆ ವೀರಶೈವರಲ್ಲಿ ಶಿವಭಕ್ತರು. ವೀರಶೈವ ಶಿವಭಕ್ತರು ಯಾವುದೋ ಕಾರಣಕ್ಕಾಗಿಪ್ರತಿಜ್ಞೆಗೈಯ್ದು ಪವಾಡಗೊಳಿಸುವ ಶಕ್ತಿಯನ್ನು ಹೊಂದಿದವರು. ಬಸವಾದಿ ಸಮಕಾಲೀನರಾದ ಶಿವಶರಣರು ನೈತಿಕಸಮಾಜವನ್ನು ಸ್ಥಾಪಿಸಲು ಹೆಣಗಿದರು. ೬೩ ಪುರಾತನರು ದಕ್ಷಿಣ ಭಾರತದಲ್ಲಿ ತಮ್ಮ ಬದುಕು ಹಾಗೂ ತತ್ವ ನೀತಿಗಳಿಂದ ಜನಪ್ರಿಯ ಹೊಂದಿದ ಸಂತರು. "ಶೈವಧರ್ಮ ಶಕ್ತಿಗುಂದುತ್ತಲಿದ್ದ ಆ ಸಂದರ್ಭದಲ್ಲಿ ತಮ್ಮ ವೈಯುಕ್ತಿಕ ಶಕ್ತಿ, ಸಾಮರ್ಥ್ಯ ಪ್ರಭಾವಗಳಿಂದ ಶೈವಧರ್ಮದ ಪುನರುತ್ಥಾನ ಮಾಡಿದ ಮಹನೀಯರೇ ಅರುವತ್ತು ಮೂರು ಪುರಾತನರೆಂಬ ಶೈವ ಸಂತರು" (ಎಸ್. ವಿದ್ಯಾಶಂಕರ; ೧೯೮೭:೬೯)ಸುಮಾರು ಕ್ರಿ.ಶ ೫ನೆಯ ಶತಮಾನದಿಂದ ೯ನೆಯ ಶತಮಾನದವರೆಗೆ ಚೇರ, ಚೋಳ, ಪಾಂಡ್ಯ ಮೊದಲಾದ ತಮಿಳುನಾಡಿನ ಪ್ರದೇಶದಲ್ಲಿ ಬಾಳಿ ತಮ್ಮ ಪರಿಶುದ್ಧವಾದ ನಡೆ ನುಡಿಗಳಿಂದ ಜನತೆಯ ಬದುಕನ್ನು ಪಾವನಗೊಳಿಸುತ್ತ ಹೋದರು. ಇದರಿಂದ ಕನ್ನಡದ ಶಿವಭಕ್ತಹಾಗೂ ಶಿವಶರಣರ ಮೇಲೆ ಅಪಾರ ಪರಿಣಾಮವುಂಟಾಗಿದೆಯಲ್ಲದೆ ಒಟ್ಟು ವೀರಶೈವ ಹಸ್ತಪ್ರತಿ ನಿರ್ಮಾಣಕ್ಕೆ ಇವರಕೊಡುಗೆ ಮಹತ್ವವಾದದ್ದು. ಶಿವಭಕ್ತ ಹಾಗೂ ಶಿವಶರಣರನ್ನು ಕೀರ್ತಿಸಲು ಕನ್ನಡದ ವೀರಶೈವ ಕವಿಗಳಿಗೆಅತ್ಯಂತ ಅಭಿಮಾನವಿದೆ. ಷಟ್ಪದಿ ಹಾಗೂ ಸಾಂಗತ್ಯ ರೂಪಗಳಲ್ಲಿ ಈ ವಿಷಯ ಕುರಿತಾದ ಹಸ್ತಪ್ರತಿಗಳು ನಿರ್ಮಾಣವಾಗಿದೆ. ಭಕ್ತಿರಸಸೋನೆ, ಬಸವಶಿಖಾಮಣಿ. ಪ್ರಭುದೇವರ ಸಾಂಗತ್ಯ, ಸಿದ್ಧರಾಮನ ಸಾಂಗತ್ಯಗಳು ಬಸವಾದಿಶರಣರ ಚರಿತ್ರೆಯನ್ನು ವಿವರಿಸುವ ಕೃತಿಗಳಾಗಿವೆ; ಶಿವಭಕ್ತರ ಚರಿತೆ, ಶಿವಭಕ್ತರಪುರಾಣ, ಶಿವಭಕ್ತರ ರಗಳೆಶಿವ ಭಕ್ತ ವಿಲಾಸ, ಶಿವಭಕ್ತ ವಿಷಯ ಹಾಗೂ ಲಳಿಯಲಿಂಗರಾಜನ 'ಶಿವಭಕ್ತ ರತ್ನಾಕರ' ಹಸ್ತಪ್ರತಿಗಳು ಶಿವಭಕ್ತರನ್ನುಕುರಿತು ರಚಿತವಾಗಿವೆ.

ಜೈನರಲ್ಲಿಯ ತೀರ್ಥಂಕರ ಹಾಗೂ ತ್ರಿಷಷ್ಟಿಶಲಾಕಾ ಪುರುಷ ಚರಿತೆಯನ್ನು ತಿಳಿಸಲು ಚಂಪೂರೂಪ ಮಾಧ್ಯಮವಾದರೆ, ವೀರಶೈವರಲ್ಲಿ ವಚನ, ಸಾಂಗತ್ಯ, ಷಟ್ಪದಿ ಮುಂತಾದ ದೇವ ರೂಪಗಳು ಬಳಕೆಯಾದವು. ಜೈನರ ಶಿಷ್ಟಕಾಲದಲ್ಲಿ ತಮ್ಮ ಅಸ್ತಿತ್ವ ಕಳೆದುಕೊಂಡ ಸಾಂಗತ್ಯದಂತ ಕೆಲರೂಪಗಳು, ವೀರಶೈವ ಹಸ್ತಪ್ರತಿಗಳಿಗೆ ಮಾಧ್ಯಮವಾಗಿ ಜನಪ್ರಿಯತೆ ಪಡೆದವು. ಕ್ರಿ.ಶ ೧೬೫೮ರಲ್ಲಿ ಚೆನ್ನಯ ಕವಿಯಿಂದ ರಚಿತವಾದ ಶಿವಭಕ್ತ ಕೆಂಭಾವಿ ಭೋಗಣ್ಣನ ಚರಿತೆಯನ್ನು ವಿವರಿಸುವ 'ಕೆಂಭಾವಿಭೋಗಣ್ಣನ ಸಾಂಗತ್ಯ'[೧೨] ಹಸ್ತಪ್ರತಿ ಸಾಂಗತ್ಯರೂಪದಲ್ಲಿ ಹುಟ್ಟಿತು.

ಅಂತ್ಯ: ಮರದ ನಿಧಾನರುಹಿ ತ್ರೋರಿದ ಪರಿ

ನೆರೆ ಪೇಳದವಾರಾರೆ ನಿಲ್ಲು

ಉರ್ವಿಗೆ ಬಸವೇಶ್ವರನ ಪುತ್ರನು ತಾನು

ಅರಿದು ಹೇಳಿದ ಕೃತಿ ರಚನೆ.

ಕೇತಾರಕ್ಕೆ ಪೋಗಿ ಪೇತಳಾವ ನೀಂಡೆಯ

ಪಾತಾಳಗಂಗೆಯ ಮಿಂದೂ

ಶಿವನಂ ಕಂಡ ಫಲಗಳು ಭೋಗಂಣನ

ಚರಿತೆಯನಾದರಿಸಿ ಕೇಳ ಮನುಜರನು ಸುಖಮಂ ಪಡುವರು

ಹಾಗೆಯೇ ಶಿವಭಕ್ತ ಕಲಿಗಣನಾಥನ ಚರಿತ್ರೆಯನ್ನು ವಿವರಿಸುವ ಮಲ್ಲಯ್ಯ ಕವಿಯ `ಕಲಿಗಣನಾಥನ ಸಾಂಗತ್ಯ''[೧೩]ಹಸ್ತಪ್ರತಿಯು ಗಮನಾರ್ಹವಾಗಿದೆ.

ಪವಾಡವನ್ನು ಮಾಡುವುದರ ಮೂಲಕ ಶಿವನನ್ನು ಒಲಿಸಿಕೊಂಡ ಶಿವಭಕ್ತರನ್ನು ಕುರಿತಾದ ಹಸ್ತಪ್ರತಿಗಳು ಕನ್ನಡ ಸಂದರ್ಭದಲ್ಲಿ ನಿರ್ಮಾಣಗೊಂಡಿವೆ. ಕ್ರಿ.ಶ.೧೬೦೦ರಲ್ಲಿ ಸಾಂಗತ್ಯ ರೂಪದಲ್ಲಿ ಪ್ರಕಟವಾದ ಚನ್ನಮಲ್ಲೇಶನ `ದೀಪದಕಲಿ ಸಾಂಗತ್ಯ'[೧೪]ಎಂಬ ಹಸ್ತಪ್ರತಿ ದೀಪದ ಕಲಿಯರ ತನ್ನ ಕೇಶವನ್ನು ದೀಪದಂತೆ ಮಾಡಿಕೊಂಡು ಉರಿಸಿ ಶಿವನನ್ನು ಪ್ರತ್ಯಕ್ಷ ಮಾಡಿಕೊಂಡ ಘಟನೆಗಳನ್ನು ವಿವರಿಸುತ್ತದೆ.

ಹರಿಹರ,ಭೀಮಕವಿಯಿಂದ ಮೊದಲಾದ ಈ ಶಿವಭಕ್ತ, ಶಿವಶರಣ ವಿಷಯದಲ್ಲಿ ಬರೆಯುವ ಪರಂಪರೆ ವಚನಮತ್ತು ವಚನೋತ್ತರ ಕಾಲದಲ್ಲಿಯೂ ಪ್ರಯೋಗವಾಗಿದೆ. ಭೀಮಕವಿಯ ಬಸವಪುರಾಣ, ವಿರೂಪಾಕ್ಷ ಪಂಡಿತನ ಚನ್ನಬಸವಪುರಾಣ. ಯಳಂದೂರ ಹರೀಶ್ವರನ ಪ್ರಭುದೇವರ ಪುರಾಣ, ಚೆನ್ನಬಸವಾಂಕನ ಮಹಾದೇವಿಯಕ್ಕನ ಪುರಾಣ,ರಾಘವಾಂಕನ ಸಿದ್ಧರಾಮ ಪುರಾಣಗಳು ಮುಂತಾದವು ಶಿವಶರಣರ ಚರಿತ್ರೆಗಳನ್ನು ಕಟ್ಟಿಕೊಡುತ್ತವೆ.

೬.೩ ಪುರಾತನರ ಚರಿತ್ರೆ ಬರೆಯುವಾಗ ವೀರಶೈವ ಕವಿಗಳಿಗೆ ಕಾವ್ಯದ ಮಾದರಿ ಜೈನರದ್ದಾದರೆ ವಸ್ತುವಿಗೆತಮಿಳು ಪೆರಿಯ ಪುರಾಣ ಮಾದರಿಯಾಗಿದೆ. ಆದ್ದರಿಂದ "ವಸ್ತುವಿನ ಆಯ್ಕೆ ಹಾಗೂ ವಿಭಜನೆಯ ವಿಧಾನದಲ್ಲಿ, ನಿರೂಪಣೆಯಲ್ಲಿ ಜೈನ ಮೇಲ್ಪಂಕ್ತಿಯಿದ್ದೂ ವೀರಶೈವ ಕವಿಗಳು ಅದೇ ಎರಕಕ್ಕೆ ಹೊಸಧಾತು ಹಾಕಿದ್ದಾರೆ"(ಹಂಪನಾ;೧೯೬೫;೧೬೩). ಹೀಗಾಗಿ ಈ ವಿಷಯದ ಸಂಬಂಧವಾಗಿ ಜೈನರಿಗೂ ವೀರಶೈವರಿಗೂ ಹೆಚ್ಚು ಸಾಮ್ಯತೆ ಇದೆ. ಜೈನಕವಿಗಳು ಕಾವ್ಯಾರಂಭದಲ್ಲಿ ಪಂಚಪರಮೇಷ್ಠಿಗಳು, ಪೂರ್ವ ಜೈನಾಚಾರ್ಯರು ಪೂರ್ವ ಜೈನಕವಿಗಳನ್ನುಸ್ಮರಿಸಿ ತ್ರಿಷಷ್ಟಿ ಮಹಾಪುರುಷ ಚರಿತೆಗೆ ತೊಡಗುತ್ತಾರೆ. ಹಾಗೆಯೇ ವೀರಶೈವ ಕವಿಗಳು ಇವರನ್ನು ಸ್ಮರಿಸಿ ತ್ರಿಷಷ್ಟಿಮಹಾಪುರಾತನರ ಚರಿತೆಗೆ ತೊಡಗುತ್ತಾರೆ.

ಕ್ರಿಶ ೧೬೫೦ರಲ್ಲಿ ಸಾಂಗತ್ಯದಲ್ಲಿ ರೂಪಗೊಂಡ ಶಿವಯೋಗಿ ಸೋಮೇಶ ಕವಿಯು 'ಅರುವತ್ತುಮೂರು ಪುರಾತನರಸಾಂಗತ್ಯ"[೧೬] ಹಸ್ತಪ್ರತಿಯಲ್ಲಿ ಶಿವಕವಿ, ಶಿವಶರಣರನ್ನು ನೆನೆಯುತ್ತಾನೆ.ಹಾಗೇಯೇ ವಾರ್ಧಕ ಷಟ್ಪದಿಯಲ್ಲಿ ವೀರಭದ್ರ ಕವಿ ರಚಿಸಿದ "೬೩ ಪುರಾತನರ ಚರಿತ್ರೆ"[೧೭] ಕೂಡಾ ಆ ಬಗೆಯದೆ ಕ್ರಿಶ ೧೫೦೦ ರಲ್ಲಿ ಚಂಪು ರೂಪದಲ್ಲಿ ಸುರಂಗ ಕವಿಯಿಂದ ನಿರ್ಮಾಣವಾದ 'ತ್ರಿಷಷ್ಠಿ ಪುರಾತನರ ಚರಿತ್ರೆ"[೧೮] ಬಹು ಮುಖ್ಯ ಕೃತಿಯಾಗಿದೆ.

ಹೀಗೆ ಜೈನರಲ್ಲಿ ತ್ರಿಷಷ್ಠಿ ಶಲಾಕ - ಪುರುಷರನ್ನು, ವೀರಶೈವರಲ್ಲಿ ಅರುವತ್ತಮೂರು ಪುರಾತನರ ಕಥಾ ಮಾದರಿಯನ್ನುಹೇಳುವಾಗ ಒಬ್ಬರಿಂದೊಬ್ಬರು ಪ್ರೇರಣೆ ಪಡೆದಿರಬಹುದು. ಎರಡರ ಉದ್ದೇಶ ಧರ್ಮವಾದರೂ ಅಲ್ಲಿ ಪ್ರದೇಶ, ಸಾಹಿತ್ಯ, ಸಮಾಜ ಮತ್ತು ಸಂಸ್ಕೃತಿಗಳ ಮಹತ್ವವನ್ನು ಎರಡೂ ಬೇರೆ ಬೇರೆಯಾಗಿ ತಮ್ಮ ಸಮುದಾಯದ ನೆಲೆಯಲ್ಲಿ ವಿವರಿಸಲು ಪ್ರಯತ್ನಿಸುತ್ತಾರೆ.

**ತಾತ್ವಿಕ ಹಸ್ತಪ್ರತಿಗಳು: ಷಟ್ಸ್ಥಲ: ಅಷ್ಟಾವರಣ: ಪಂಚಾಚಾರ:**

ವೀರಶೈವ ಧರ್ಮ ಸಾಮಾನ್ಯವಾಗಿ ಮೂರು ಅಂಶಗಳನ್ನು ಒಳಗೊಂಡು ವ್ಯಕ್ತಿ ಮತ್ತು ಸಮಾಜವನ್ನು ಎತ್ತಿ ಹಿಡಿಯುವಲ್ಲಿ ತನ್ನದೆ ಆದ ವಿಶಿಷ್ಟತೆಯನ್ನು ಸಾಧಿಸಿದೆ. ಮೂರು ಪ್ರಮುಖ ಅಂಶಗಳೆಂದರೆ-ಮೊದಲನೆಯದು ತತ್ವಭಾಗ,ಎರಡನೆಯದು ಆಚರಣೆಯ ಭಾಗ,ಮೂರನೆಯದು ಆಚಾರ ನಿರ್ಣಯ ಈ ಮೂರು ಅಂಶಗಳು ವೀರಶೈವ ತಾತ್ವಿಕ ಹಸ್ತಪ್ರತಿಗಳಲ್ಲಿ ಮುಖ್ಯವಾಗಿ ಉಲ್ಲೇಖವಾಗುತ್ತವೆ. ವೀರಶೈವ ಧರ್ಮಕ್ಕೆ ಶಕ್ತಿ ವಿಶಿಷ್ಟಾದ್ವೈತ ತಾತ್ವಿಕ ನೆಲೆಗಟ್ಟನ್ನು ಕೊಟ್ಟರೆ,ಷಟಸ್ಥಲ ಸಿದ್ಧಾಂತ ಅದನ್ನು ಅನುಸರಿಸಿ ಅಷ್ಟಾವರಣಗಳು ಆಚರಣೆಯ ನೆಲೆಗಟ್ಟನ್ನು ಕೊಡುತ್ತವೆ. ಪಂಚಾಚಾರಗಳು ಕೂಡಾ ಇಂಥ ಆಚರಣೆಯ ನೆಲೆಗಟ್ಟನ್ನು ಕೊಡುವಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಆದ್ದರಿಂದಲೇ ಷಟಸ್ಥಲ,ಅಷ್ಟಾವರಣ,ಪಂಚಾಚಾರಗಳುಆಚರಣೆಯ ವಿದಿಯನ್ನೆ ಪ್ರಮುಖ ಉದ್ದೇಶ ಇಟ್ಟುಕೊಂಡು ಜನ್ಮತಳೆದವು. ಇವುಗಳ ಮೂಲಕ ವೀರಶೈವ ಪರಂಪರೆ ಇತರ ಧಾರ್ಮಿಕ ಆಚರಣೆ,ಪದ್ಧತಿಗಳಿಂದ ಬೇರೆಯಾಗಿಯೇ ಸಮುದಾಯಪರ ಸಿದ್ಧಾಂತವನ್ನು ರೂಪಿಸಿತು.

ಷಟಸ್ಥಲ, ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಈ ಸಿದ್ಧಾಂತಗಳಿಂದ ವ್ಯವಸ್ಥಗೊಂಡಿದೆ. ಶಿವಶರಣ ಇಲ್ಲಿ ಒಂದರ ಮೂಲಕ ಇನ್ನೊಂದಕ್ಕೆ ಏರಿ ಐಕ್ಯನಾಗುವ ಕ್ರಿಯೆ ಇದೆ. ಆದ್ದರಿಂದಲೆ ಇವುಗಳಿಗೆಲ್ಲ ಒಂದೊಂದು ಸಂಬಂಧವಿದೆ. ಬಸವಾದಿ ಶರಣರು ಈ ಮಾರ್ಗದಲ್ಲಿ ನಡೆದು ಐಕ್ಯಸ್ಥಲಹೊಂದಿದ ಪ್ರಸಂಗವನ್ನು ಕನ್ನಡದಅನೇಕ ಹಸ್ತಪ್ರತಿಗಳು ತಿಳಿ ಸುತ್ತಿವೆಯಲ್ಲದೆ, ಇನ್ನೂ ಕೆಲವು ಹಸ್ತಪ್ರತಿಗಳು ತತ್ವಸಿದ್ಧಾಂತ ಹಾಗೂ ಆಚರಣೆಯ ಬಗೆಯನ್ನು ತಿಳಿಸುತ್ತವೆ. ಕ್ರಿ ಶ.೧೪೩೦ ರಲ್ಲಿ ವಚನ ಮಾದರಿಯಲ್ಲಿ ರಚಿತವಾದ ಮಹಲಿಂಗ ದೇವ ಕವಿಯ 'ಏಕೋತ್ತರ ಶತಸ್ಥಲ"[೧೯] ಷಟಸ್ಥಲ ಸಿದ್ಧಾಂತವನ್ನು ನಿರೂಪಿಸುತ್ತದೆ.

ಅಷ್ಟಾವರಣವೆಂದರೆ: ಗುರು,ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ ಈ ಎಂಟುಆಚರಣೆಗಳಲ್ಲಿ ವೀರಶೈವ ಭಕ್ತ ನಂಬಿಗೆ ಇಡುವುದು. ಶುದ್ಧ ಮನಸ್ಸು, ಶುದ್ಧ ಬದುಕು ಇವುಗಳ ಉದಾತ್ತ ತತ್ವ,ಈ ಪರಿಭಾಷೆಗಳ ವಿಷಯವಾಗಿ ವಚನಗಳಲ್ಲಿ ವಿಪುಲವಾಗಿ ಹಸ್ತಪ್ರತಿಗಳು ನಿರ್ಮಾಣವಾಗಿವೆ. ಬೇರೆ ರೂಪಗಳು ಈವಿಷಯ ನಿರೂಪಿಸಲು ಬಳಕೆಯಾದವು. ಕ್ರಿಶ ೧೧೬೦ರಲ್ಲಿ ಸಿದ್ಧರಾಮನು ತ್ರಿವಿಧಿಯಲ್ಲಿ 'ಅಷ್ಟಾವರಣ ಸ್ತೋತ್ರದತ್ರಿವಿಧಿ"[೨೦] ಎಂಬ ಕೃತಿಯನ್ನು ರಚಿಸಿದ್ದಾನೆ. ಈ ಕೃತಿಯಲ್ಲಿ ಒಟ್ಟು ಅಷ್ಟಾವರಣಗಳ ಸ್ವರೂಪ ಮಹಿಮೆಗಳುಅಭಿವ್ಯಕ್ತಗೊಂಡಿವೆ./

ವೀರಶೈವ ಧರ್ಮದ ತತ್ವ ಆಚರಣೆಗಳನ್ನು ಹೇಳುವಲ್ಲಿ ಪಂಚಾಚಾರ ಕ್ರಮವೂ ಕೂಡಾ ಒಂದು.ಇಲ್ಲಿ ಭಕ್ತ ಲಿಂಗಾಚಾರ,ಸದಾಚಾರ, ಶಿವಾಚಾರ, ಗಣಾಚಾರ, ಭೃತ್ಯಾಚಾರಗಳ ಮೂಲಕ ಆಂತರಿಕ ಶುದ್ಧತೆಯನ್ನು ಕಾಯ್ದುಕೊಂಡು ಧರ್ಮವನ್ನಾಚರಿಸಬೇಕಾಗುತ್ತದೆ. ಹೀಗೆ ಆಚರಿಸುವಾಗ ಎದುರಾಗುವ ಸಂಕಟಗಳನ್ನು ಇವುಗಳ ಮೂಲಕ ನಿವಾರಿಸಿಕೊಳ್ಳುವ

ನಂಬಿಕೆಯನ್ನು ವೀರಶೈವರು ಹೊಂದಿದ್ದರಿಂದಲೆ ಈ ಬಗೆಯ ವಿಷಯವಾಗಿ ಅನೇಕಹಸ್ತಪ್ರತಿಗಳು ಹುಟ್ಟಿಕೊಂಡವು. ಕ್ರಿ ಶ ೧೪೭೦ ರಲ್ಲಿ ತೋಂಟದ ಸಿದ್ಧಲಿಂಗ ಶಿವಯೋಗಿ ರಚಿಸಿದ 'ತೋಂಟದ ದೇವರವಚನ'" ಪಂಚಾಚಾರದ ಜೊತೆಗೆ ಷಟಸ್ಥಲ ಅಷ್ಟಾವರಣವನ್ನು ವಿವರಿಸುವ ಅಪರೂಪದ ಹಸ್ತಪ್ರತಿಯಾಗಿದೆ.ಅದರ ಸ್ವರೂಪ ಹೀಗಿದೆ.

ತೋಂಟದ ದೇವರ ವಚನಾ ಮೆತ್ತಾತನ ಅಶನವನುಂಡು
ಕೆಚ್ಚಾನು ಚರ್ಮವ ಕಟ್ಟಿ ಬೆಚ್ಚಾನ ಮನೆಯಲ್ಲಿ ಬಿದ್ದಿರ್ಪವರಿಗೆ
ಅನಂತಕಾಲ ಬಹುದುಃಖ ತಪ್ಪದು ಉತ್ಪತ್ಯ ಸ್ಥಿತಿಲಯಕ್ಕೆ
ಒಳಗಾದವರೆಲ್ಲ ನಿತ್ಯ ನಿರಂಜನ ವಸ್ತುವ ನುಚ್ಚು ಮಚ್ಚು
ಅರಿಯದೆ ವೃಥಾ ಹೋಯಿತು ನೋಡಾಜಗ ಮಹಾಲಿಂಗ
ಶಿವ ಸಿದ್ದೇಶ್ವರ ಪ್ರಭುವೆ|| ೧||

ಪಂಚಾಚಾರಗಳನ್ನು ಆಚರಿಸದಿದ್ದರೆ ಬದುಕು ವ್ಯರ್ಥ ಹಾಳಾಗಿ ಹೋಗಿತ್ತದೆಂಬುದು ಇಲ್ಲಿ ಕವಿಯ ಆಶಯವಾಗಿದೆ.

ಹೀಗೆ ವೀರಶೈವ ತಾತ್ವಿಕ ಹಸ್ತಪ್ರತಿಗಳು ಯಾವುದೇ ಒಂದು ನಂಬಿಕೆ, ಆಚರಣೆ, ಉದ್ದೇಶವನ್ನಿಟ್ಟುಕೊಂಡು ರಚಿತವಾದವುಗಳೇ. ಕೃತಿ ರಚನೆಯಲ್ಲಿ, ರೂಪ ಸೃಷಿಯಲ್ಲಿ, ವಸ್ತುವಿನ ಆಯ್ಕೆಯಲ್ಲಿ, ನಿರೂಪಣಾ ರೀತಿಯಲ್ಲಿ, ಕಾವ್ಯಸೌಂಧರ್ಯದಲ್ಲಿ ಎಲ್ಲ ಮಾದರಿಗಳಲ್ಲಿ ಅವರು ತುಳಿದುದು ವಿಶಿಷ್ಟಮಾರ್ಗ."ವೀರಶೈವರು ನಡೆಸಿದ ಅನೇಕ ಚಳುವಳಿಗಳಲ್ಲಿ ಹಸ್ತಪ್ರತಿ ಚಳುವಳಿಯೂ ಒಂದು" (ಡಾ ವೀರಣ್ಣ ರಾಜೂರ; ೧೯೮೭;) ಬಹುಶಃ ಈ ಬಗೆಯಚಳುವಳಿ ಜೈನ ವೈದಿಕಗಳಲ್ಲಿ ನಡೆಯಲ ಇಲ್ಲವಾದರೂ ಅದು ಆಯಾ ಮತದ ಸಂದರ್ಭದಲ್ಲಿ ಒಂದು ಬಗೆಯ ಚಳುವಳಿಯೇ ಹೌದು.



ವೀರಶೈವ ಹಸ್ತಪ್ರತಿಗಳನ್ನು ಬೆಳಸುವುದರಲ್ಲಿ ಕೂಲಿಮಠ, ಓದಿಸುವಮಠ,ಸಾಲಿಮಠ,ಅಯ್ನಗಳ ಮಠಗಳಂತಮುಂತಾದ ಧಾರ್ಮಿಕ ಸಂಸ್ಥೆಗಳು ಪ್ರಧಾನಪಾತ್ರ ವಹಿಸುತ್ತವೆ. ನಾಮವಿಜ್ಞಾನದ ಶಿಸ್ತಿನಿಂದ ಈ ಹೊತ್ತಿನ ಜಂಗಮ ಮತ್ತುಮಠಮಾನ್ಯಗಳ ಅಧ್ಯಯನ ನಡೆದರೆ ಹಸ್ತಪ್ರತಿಗಳಿಗೆ ವಿಶೇಷವಾದ ಸಂಗತಿಗಳು ಪ್ರಕಟವಾಗುವ ಸಾದ್ಯತೆ ಇದೆ.

"ಒಂದು ಹೊಸ ಕಾವ್ಯವು ಹುಟ್ಟಿದಕೂಡಲೆ ಅದನ್ನು ಓದುವವರು, ಓದಿಸಿಕೇಳುವವರು, ಪ್ರತಿ ಮಾಡವವರು, ಮಾಡಿಸುವವರು ಹಲವರಿರುತ್ತಿದ್ದರು."(ಎಚ್ .ದೇವೀರಪ್ಪ;೧೯೭೭;೬೯) ಮಾಹಾಮಾತ್ಯಲಕ್ಷ್ಮಣ ದಂಡೇಶನು ತನ್ನ ಶಿವತತ್ವ ಚಿಂತಾಮಣಿಯಲ್ಲಿ ಈ ಸಂಬಂಧ ವಿವರವನ್ನು ಉಲ್ಲೇಖಿಸುತ್ತಾನೆ.

(ಉದ್ಧೃತ: ಎಚ್ ದೇವೀರಪ್ಪ) ಹರುಷದಿಂ ಶಿವತತ್ವ ಚಿಂತಾಮಣಿಯೆನಿಪ್ಪ
ವರ ಕೃತಿಯನೊರೆದವಂಗೆ ಬರದಂಗೆ ವಾಚಿಪಂ
ಗುರು ತಾರಾ ನಂದಂದಿದರ ತಾತ್ಪರ್ಯಮಂ ವಿಸ್ತರಿಸಿ ಪೇಳ್ವವಂಗೆ
ಪರಮ ಸದ್ಭಕ್ತಿಯಿಂದಾದರಿಸಿ ಕೇಳ್ದಂಗೆ



ಎರಡಲ್ಲದಿದರ ತಾತ್ಪರ್ಯಮಂ ತಿಳಿದಗಿಪ

ಪರ ಸುಖಂಗಳು ಸಿದ್ಧಿಸುವದೆಂದ ದೇಶಿಕನ ಚರಣಾಂಬುಜಕ್ಕೆ ಶರಣು

ಒಂದು ಕೃತಿಹುಟ್ಟುವ ಸಂದರ್ಭವನ್ನು ಕುತೂಹಲದಿಂದ ಕಾಯುವ ಓದುಗ ಅದನ್ನು ಕೇಳುವ ಜನವರ್ಗ ಮತ್ತುಪ್ರತಿಮಾಡುವ ಕುಶಲವರ್ಗಗಳಿದ್ದ ಕಾರಣವಾಗಿಯೇ ವೀರಶೈವ ಸಂದರ್ಭದಲ್ಲಿ, ಅನಂತಮುಖವಾದ ವಿಷಯ ವೈವಿದ್ಯಬಹುಮುಖವಾದ ರೂಪವೈಧ್ಯಗಳು ತಮ್ಮ ಅಭಿವ್ಯಕ್ತಿಯನ್ನು ಕಾಣಲು ಸಾಧ್ಯವಾಯಿತು. ಇದರಿಂದವೀರಶೈವ ಹಸ್ತಪ್ರತಿಗಳ ವಿಷಯ ಹಾಗೂ ರೂಪ- ಸಂಪತ್ತು ಒಟ್ಟು ಕನ್ನಡ ಹಸ್ತಪ್ರತಿಗಳ ಒಂದು ಪ್ರಮುಖ ಘಟ್ಟವನ್ನುಪ್ರತಿನಿಧಿಸುತ್ತವೆಂಬುದು ಗಮನಾರ್ಹ ಸಂಗತಿ.

ಕ್ರಿ ಶ ೧೬ನೆಯ ಶತಮಾನದ ಹೊತ್ತಿಗೆ ಧಾರ್ಮಿಕವಾದ ಜೈನ ಮತ್ತು ವೀರಶೈವ ಪರಂಪರೆಗಳ ಸಂಘರ್ಷವನ್ನು ಪ್ರತಿ-ನಿಧಿಸುವ ಹಸ್ತಪ್ರತಿಯೊಂದು ಮೈಸೂರು ವಿಶ್ವವಿಧ್ಯಾನಿಲಯದ ಹಸ್ತಪ್ರತಿ ಭಂಡಾರದಲ್ಲಿದೆ. ಕರ್ನಾಟಕದ ಧಾರ್ಮಿಕ ಸಂಘರ್ಷದಸ್ವರೂಪವನ್ನು ದಾಖಲಿಸುವಲ್ಲಿ ಶಾಸನಗಳಂತೆ ಹಸ್ತಪ್ರತಿಗಳು ಬಹುಮುಖ್ಯ ಆಕರವಾಗುತ್ತವೆ ಎಂಬುದಕ್ಕೆ ಮಹಾದೇವ ಕವಿ ರಚಿಸಿದ 'ಹೇರೂರು ಹೆಣ್ಣಿನ ಸಾಂಗತ್ಯ' ವೆಂಬ ಆಕರ್ಷಕ ಹಸ್ತಪ್ರತಿ ವಿಶಿಷ್ಟವಾಗಿದೆ. ಮಹಿಳೆಯೂ ಕೂಡಾ ಆ ಹೊತ್ತಿನಲ್ಲಿ ಧಾರ್ಮಿಕ ಸಂಘರ್ಷಕ್ಕೆ ಒಳಗಾಗಿದ್ದರೆಂಬ ಸಂಗತಿಯನ್ನಲ್ಲದೆ ಜೈನಧರ್ಮ ಹೆಣ್ಣನ್ನು ಶೋಷಿಸುವ ವಿಷಯವನ್ನು ಹಸ್ತಪ್ರತಿಸೂಚಿಸುತ್ತದೆ. ಹೇರೂರಿನ ಹೆಣ್ಣು ಜೈನನನ್ನು ಕಂಡು ಮನಹೇಸಿದ ಘಟನೆಯೆ ಈ ಹಸ್ತಪ್ರತಿಯವಸ್ತು.

ಆದಿ: ಹೇರೂರು ಹೆಣ್ಣಿನ ಸಾಂಗತ್ಯ

ಗುರುತರ ಪರಶಿವ ಪರಧಿ ಸಖನದನೆ
ಶಿವದಸ್ತಿರಧರ ಶೂಲದ ಜಶಿರಕರಧಂ
ಗಿರೀಜೇಶನೊಲಿದು ರಕ್ಷಿಪುದು ||೧||
(ಹೇರೂರು ಹೆಣ್ಣು ಜೈನನ ಕಂಡು ಮನಹೇಸಿ
ಮಾರವರ್ದವನಿಳೆಗೈದೀ
ನಾಲಿಗಂಡಾಗಿ ಧಾರುಣಿಯೊಳು ಮೆರೆದ (ಪರಾಪರ)ವಿ
ಚಾರವನೊಲಿದು ಬಣ್ಣಿಸುವೆ ||೨||
ತೊಡಗುವೆ ನೀ ಕೃತಿಯನು ಶಿವಕವಿಗಳ
ಅಡಿಯನನೆದು ವರವಡೆವೆ
ಮೃಡಕವಿ ಮಹದೇವನ ವರ
ಸದ್ಭಾವದ ನುಡಿಯ ಸ(ಜ್ಜನರಾಲಿಪುದು).

ಹೀಗೆ ವೀರಶೈವ ಹಸ್ತಪ್ರತಿಗಳು ಜೈನರ ತರುವಾಯ ತಮ್ಮದೆ ವಿಶಿಷ್ಟ ನೆಲೆಯಲ್ಲಿ ರೂಪ ಹಾಗೂ ವಿಷಯ ವೈವಿಧ್ಯದಸಂಪತ್ತುಗಳಾಗಿ ಸಮಕಾಲೀನ ಸಂದರ್ಭದ ಅಗತ್ಯತೆಯನ್ನು ಸಮರ್ಥವಾಗಿ ಪೂರೈಸಿವೆ.

ಅಡಿಟಿಪ್ಪಣಿ:

೧. ಕೆ.ಎ.೧೮೭/೧ ಸಂ: ಎಚ್ ದೇವೀರಪ್ಪ.೧೯೬೨: ಮೈಸೂರು ಪ್ರಾಚ್ಯವಿದ್ಯಾಸಂಶೋಧನಾಲಯದ ಕನ್ನಡ ಹಸ್ತಪ್ರತಿ ವರ್ಣನಾತ್ಮಕ ಸೂಚಿ: ಸಂ : ೧ ಪು ೬೦

೨. ೧೦೪ ಸಂ ಕೆಳದಿ ಗುಂಡಾಜೊಯಿಸ್ ; ೧೯೮೯: ಹುಬ್ಬಳ್ಳಿ ಮೂರು ಸಾವಿರ ಮಠದ ಕನ್ನಡ ಹಸ್ತಪ್ರತಿಗಳ ಸೂಚಿ ಪುಟ ೨೧೮.

೩. ಕೆ.ಎ.೩೧೮ ಸಂ:ಎಚ್ .ದೇವೀರಪ್ಪ:೧೯೬೨ ಮೈ.ಪ್ರಾ.ವಿ.ಸಂ.ಕ.ಹ.ವ.ಸೂ.ಸಂ೩;೨೬೧

೪. ೨೯ ಸಂ: ಕೆಳದಿ ಗು ಂಡಾಜೋಯಿಸ್ : ೧೯೮೯: ಹು.ಮೂ.ಮಠ.ನು.ಕ.ಹಸೂ: ೧೮೬

೫. ಕೆ. ೩೯ ಸಂ: ಎಸ್ .ಶಿವಣ್ಣ: ೧೯೮೨: ಬೆಂಗಳೂರು ವಿ.ವಿ.ದ ಕ.ಹ.ವ.ಸೂ.:ಸಂ೧:೪೨೯

೬. ಕೆ.೧೩/೧ ಅದೇ ಪು: ೪೮೦

೭. ಕೆ.ಬಿ.೬೯೯/೨೭ ಸಂ:ಬಿ.ಎಸ್ .ಸಣ್ಣಯ್ಯ:೧೯೮೧ ಮೈಸೂರು.ವಿ.ವಿ.ಕ.ಹ.ಸೂ. ಪು ೧೦೭.

೮. ತಾಪ್ರ; ೮೯೯/೬ ಸಂ.ಬಿ. ಆರ್ .ಹಿರೇಮಠ; ೧೯೯೨ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದ ಹತ್ತಪ್ರತಿ ಸಂ.೧೦ ಪು-೩೪೯

೯. ಕೆ.ಎ ೩೧೮ ಸಂ: ಎಚ್ .ದೇವೀರಪ್ಪ : ೧೯೬೨ ಸಂ.೩ ಪು-೨೬೧

೧೦. ಕೆ.ಬಿ. ೨೫೮ ಅದೇ ಪು-೪೫೪

೧೧. ಕೆ.ಬಿ.೨೮೮/೧ ಅದೇ ಪು-೪೮೫

೧೨. ಕೆ. ೨೨೨: ಸಂ: ಎಸ್ ಶಿವಣ್ಣ:೧೯೮೨: ಸಂ ೧ ಪು-೮೯

೧೩. ೯೬೧೬ ಸಂ.ಕೆಳದಿ ಗುಂಡಾ ಜೋಯಿಸ್ ೧೯೮೯: ಪು-೫೭

೧೪. ೧೧೦ ಅದೇ ಪು-೧೩೬

೧೫. ಕೆ.ಬಿ.೪೫೬ :ಸಂ. ಎಚ್ ದೇವೀರಪ್ಪ; ೧೯೬೨: ಸಂ೧ ೯೪

೧೬. ಕ.ಎ.೨೯೧/೨: ಅದೇ ೯೧

೧೭.ಕೆ.ಬಿ.೩೬೫ ಅದೇ ಸಂ:೨ ಪು-೧೫೪

೧೮. ಕೆ. ೨೧೬ :ಸಂ ಎಸ್ ಶಿವಣ್ಣ:೧೯೮೨ ಸಂ:೧ ಪು-೫೨

೧೯. ಕೆ. ೩೨೩ ಎಚ್ ದೇವೀರಪ್ಪ: ೧೯೬೨ ಸಂ:೧ ಪು-೧೧೭

೨೦. ತಾಪ್ರ: ೫೭೩/೧೧ ಸಂ: ಬಿ.ಆರ್ ಹಿರೇಮಠ:೧೯೯೨ ಸಂ: ಪು-೮೨

೩) ವೈದಿಕ ಹಸ್ತಪ್ರತಿಗಳು:ರಾಮಾಯಣ:ಮಹಾಭಾರತ: ಭಾಗವತ: ವಿಷ್ಣುಪುರಾಣ: ನೀತಿಬೋಧಕ ಕೀರ್ತನೆಗಳು:

'ವೀರನಾರಾಯಣನೆ ಕವಿ' ಎಂದು ಆರಂಭಿಸುವ ಕುಮಾರವ್ಯಾಸನಿಗೆ ಮಹಾಭಾರತ ವ್ಯಾಸ ಮುನಿಯಂತೆ ವೈದಿಕ ದೃಷ್ಟಿಯಿಂದಲೆ ಗೋಚರಿಸಿದೆ. ಜೈನರಕಾಲದಲ್ಲಿ ವೈದಿಕ ವಿರೋಧಿ ಚಟುವಟಿಕೆಯೊಂದು ಮೂರ್ತಗೊಳ್ಳದಿದ್ದರೆ ಬಹುಶ: ಪಂಪನಿಗೂ ಇದು ವೈದಿಕ ಧೋರಣೆಯಲ್ಲೆ ಕಾಣುವ ಸಂಭವಿತ್ತು. ಆದರೂ ಕೂಡಾಪಂಪ ಮೂಲ ಜೈನನಲ್ಲಿ ಎಂಬ ಕಾರಣಕ್ಕಾಗಿ ಪಂಪನಲ್ಲಿ ವೈದಿಕತನ ಸುಪ್ತವಾಗಿಕೆಲಸ ಮಾಡಿದೆಯೆಂದು ವಿದ್ವಾಂಸರುಲಭಿಪ್ರಾಯಪಡುತ್ತಾರೆ. ಪಂಪಭಾರತದಲ್ಲಿ ಆಗಾಗ ತಲೆಯೆತ್ತುವ ವೈದಿಕಪರ ಸಂದರ್ಭಗಳು ಮತ್ತು ಈಗಲೂ ಕೂಡಾಅಂಣಿಗೇರಿಯ ದೇಶಪಾಂಡೆ ಎಂಬ ವೈದಿಕರು ಪಂಪನ ವಂಶಸ್ಥರಾಗಿದ್ದ ಸಂಗತಿಗಳು ಮೇಲಿನ ಮಾತನ್ನು ಸಮರ್ಥಿಸುತ್ತಾನಮ್ಮ ಗಮನವನ್ನು ಬೇರೆ ಕಡೆ ಸಳೆಯುತ್ತವೆ.

ಜಿ.ಎಸ್ .ಶಿವರುದ್ರಪ್ಪನವರು ಅಭಿಪ್ರಾಯ ಪಡುವಂತೆ."ಕನ್ನಡ ಸಾಹಿತ್ಯದ ಪ್ರಾರಂಭವೆ ವೈದಿಕ ವಿರೋಧಿ ಧೋರಣೆಯಿಂದ ಹುಟ್ಟಿಕೊಂಡ ಜೈನಧರ್ಮದ ಕವಿಗಳಿಂದ. ಮತ್ತು ಅದು ಮುಂದುವರೆದಿದ್ದು ಅದೇ ಧೋರಣೆಯವೀರಶೈವ ಕವಿಗಳಿಂದ" (೧೯೮೯;೩೯) ಇದರಿಂದ ಜೈನ ಮತ್ತು ವೀರಶೈವರ ಸಾಹಿತ್ಯರಚನೆ ವೈದಿಕರಿಗಿಂತ ಯಾಕೆಭಿನ್ನವಾಯಿತೆಂದು ಊಹಿಸುವದು ಕಷ್ಟವೇನಲ್ಲ. ಬಹುಶಃ ಈ ಎರಡರ ವೈದಿಕ ಪ್ರತಿಭಟನೆಯ ಧೋರಣೆಯೇ ಮುಂದೊಂದು ಸಾರಿ ವೈದಿಕ ಪರಂಪರೆ ಸಾಹಿತ್ಯ ಘಟ್ಟವನ್ನು ಸ್ಥಾಪಿಸುವ ಆಕಾಂಕ್ಷೆಗೆ ಕಾರಣವಾಗಿರಬೇಕು. ಇದರಿಂದವೈದಿಕ ಪರಂಪರೆಯ ವಿಷಯ ವೈವಿಧ್ಯ ಹಿಂದಿನ ಪರಂಪರಗಿಂತ ಯಾಕೆ ಭಿನ್ನವಾಯಿತೆಂದು ಊಹಿಸಲು ಕಷ್ಟಪಡಬೇಕಾಗಿಲ್ಲ.ಇದರಿಂದ ಸೊರಗುತ್ತಿದ್ದ ವೈದಿಕ ಧರ್ಮ ವೀರಶೈವರ ಆಂದೋಳನದಿಂದ ಮತ್ತೆ ತನ್ನ ಅಂತಃಶಕ್ತಿಯನ್ನು ಪಡೆದುಕೊಂಡಿತು.

ವೈದಿಕ ಹಸ್ತಪ್ರತಿ ನಿರ್ಮಾಣದ ಜೊತೆಗೆ ಒಂದು ಮಹಾಸಾಮ್ರಾಜ್ಯದ ನಿರ್ಮಾಣವೂ ಜೊತೆಗೂಡಿ ಮಧ್ಯಕಾಲೀನಕರ್ನಾಟಕದ ಸಂಸ್ಕೃತಿಯ ಸ್ವರೂಪವನ್ನು ವೈದಿಕ ಪಂಥವೇ ನಿರ್ಧರಿಸವಂತಾಯಿತು. ಹರಿದಾಸ ಸಾಹಿತ್ಯದ ಊರ್ಜಿತವೂ,ವಿಜಯನಗರದ ಅರಸೊತ್ತಿಗೆಯ ಊರ್ಜಿತವೂ, ಏಕಕಾಲಕ್ಕೆ ಸಂಭವಿಸಿದ್ದು ಗಮನಾರ್ಹ ಸಂಗತಿ. ಇದೆ ಹೊತ್ತಿಗೆ ಅಂದರೆಕ್ರಿಶ. ೧೫-೧೬ನೆಯ ಶತಮಾನಗಳ ಹೊತ್ತಿಗೆ ಇಡೀ ಭಾರತ ಒಕ್ಕೂಟದಲ್ಲಿ ನಡೆದ ಭಕ್ತಿ ಪಂಥದ ಆಂದೋಲನಗಳು ಕನ್ನಡದ ವೈದಿಕ ಪರಂಪರೆಯ ಮೇಲೆ ಅಪಾರವಾದ ಪ್ರಭಾವವನ್ನು ಬೀರಿದವು. ಮಹಾರಾಷ್ಟ್ರದಲ್ಲಿ ನಾಮದೇವ್ ಮತ್ತುಏಕನಾಥ್ , ಗುಜರಾತಿನಲ್ಲಿ ಬಹಳ ಪ್ರಭಾವ ಬೀರಿದ ಆಂದ್ರಪ್ರದೇಶದ ವಲ್ಲಭಚಾರ್ಯರೂ ಅವರ ಮಗ ವಿಠಲನಾಥನೂ,ಪಂಜಾಬಿನಲ್ಲಿ ಸಿಖ್ ಮತದ ಪ್ರವರ್ತಕರಾದ ನಾನಕ, ಉತ್ತರಪ್ರದೇಶದಲ್ಲಿ ಬೀರ್ ಮತ್ತು ತುಲಸೀದಾಸ್ ಬಂಗಾಳದಲ್ಲಿ ಶ್ರೀಕೃಷ್ಣ, ಚೈತನ್ಯ ಇವರೆಲ್ಲರೂ ಈ ಕಾಲದಲ್ಲಿ ಜನ್ಮ ತಾಳಿ ದೇಶ ಭಾಷೆಗಳಲ್ಲಿ ಹಾಡುಗಳನ್ನು ರಚಿಸಿ. ಭಜನೆ, ಕೀರ್ತನೆಗಳ ಮೂಲಕ ಭಗವದ್ಭಕ್ತಿಯನ್ನು ಪರಿಣಾಮಕಾರಿಯಾಗಿ ಪ್ರಸಾರ ಮಾಡಿದರು. ಬಹುಶಃ ಭಕ್ತಿ ಪಂಥದ ಹೋರಾಟಕ್ಕೆಮಧ್ಯಕಾಲಿನ ಕರ್ನಾಟಕದಲ್ಲಿ ನಡೆದ ಹರಿದಾಸ ಆಂದೋಲನವೂ ಸೇರಿಕೊಳ್ಳುತ್ತದೆ. ಇಡೀ ದೇಶಾದ್ಯಂತ ನಡೆದ ಈ ಧರ್ಮಜಾಗೃತಿ ಕರ್ನಾಟಕದ ವೈದಿಕ ಪರಂಪರೆಯ ಮೇಲೆ ಬಹಳಷ್ಟು ಪ್ರಭಾವ ಬೀರಿತು. ಅದರ ಮಾರ್ಗದಲ್ಲೆ ಕನ್ನಡದ ಹರಿದಾಸರು ವೈದಿಕ ಪರಿಭಾಷೆಯಲ್ಲಿ ಸಾಹಿತ್ಯ ನಿರ್ಮಾಣಕ್ಕೆ ತೊಡಗಿದರು. ಈ ಸಂದರ್ಭದಲ್ಲಿ ಅವರು ಮುಖ್ಯವಾಗಿ ಕೈಗೊಂಡ ಕಾರ್ಯವೆಂದರೆ ಭಗವದ್ಭಕ್ತಿಯ ಪ್ರಸಾರ. ಹಿಂದಿನ ಎರಡೂ ಪರಂಪರೆಗಳಿಂದ ಬೇಸತ್ತಿದ್ದ ಇವರು ತುರ್ತಾಗಿಈ ಬಗೆಯ ಪ್ರಚಾರಕ್ಕಿಳಿಯಬೇಕಾಯಿತು. ಆದ್ದರಿಂದಲೇ ವೈದಿಕರು ತಮ್ಮ ಹಸ್ತಪ್ರತಿಗಳಲ್ಲಿ ಹಿಂದಿನ ಎರಡೂ ಪರಂಪರೆಗಳಿಗಿಂತ ಭಿನ್ನವಾದ ವಿಷಯ ಹಾಗೂ ರೂಪಗಳನ್ನು ಚಾರಿಗೆ ತಂದರು. ಹೀಗೆ ವಿಷಯ ಮತ್ತು ರೂಪಗಳೆರೆಡರಲ್ಲೂ ಕ್ರಾಂತಿಕಾರಕ ಬದಲಾವಣೆ ಮಾಡಿದ ಇವರ ಹಸ್ತಪ್ರತಿಗಳಿಗೆ ಒಂದು ಐತಿಹಾಸಿಕವಾದ ಮಹತ್ವವಿದೆ.ಇವರ ಹಸ್ತಪ್ರತಿಗಳಿಗೆ ಮಹಾಭಾರತ,ರಾಮಾಯಣ, ಭಾಗವತದ ವಿಷಯಗಳು

ಮೂಲದ್ರವ್ಯವಾಗಿವೆ. ರುದ್ರಭಟ್ಟನ ಜಗನ್ನಾಥ ವಿಜಯ, ಕುಮಾರವಾಲ್ಮೀಕಿಯ ತೊರವೆ ರಾಮಾಯಣ, ತಿಮ್ಮಣ್ಣ ಕವಿಯ ಭಾರತ, ಚಾಟುವಿಠಲನಾಥನ ಭಾಗವತ, ಶ್ರೀಶೈಲಾರ್ಯನ ಕೃಷ್ಣಚಾರಿತ್ರ, ತಿಮ್ಮ ಕವಿಯ ಹರಿವಿಲಾಸ, ಚಿಕ್ಕುಪಾಧ್ಯಾಯನ ವಿಷ್ಣು ಪುರಾಣಗಳು ವೈದಿಕ ಸಂದರ್ಭದಲ್ಲಿ ಪ್ರಕಟವಾದ ಪ್ರಮುಖ ಕೃತಿಗಳು.

ವೀರಶೈವ ಕವಿಗಳಿಂದ ಜನಪ್ರಿಯಗೊಂಡ ಷಟ್ಪದಿ ರೂಪ ಮುಂದೆ ಬ್ರಾಹ್ಮಣ ಕವಿಗಳಲ್ಲಿ ತನ್ನ ಸಾರ್ಥಕತೆಯನ್ನು ಸಾಧಿಸಿತು. ಅವರು ರಾಮಾಯಣ ಮಹಾಭಾರತ, ಭಾಗವತದಂತ ವಸ್ತುಗಳನ್ನು ಸರಿಯಾಗಿ ಹರಿಬಿಟ್ಟಿರಲ್ಲದೆ. ವೇದಾಂತ ಸಿದ್ಧಾಂತ, ವೈದಿಕ ಮತ ತತ್ವಗಳನ್ನು ಚಿತ್ತರಿಸಿದರು. ಹೀಗೆ ವೈದಿಕರಲ್ಲಿ ಷಟ್ಪದಿ ರೂಪಬಳಕೆಗೊಳ್ಳುತ್ತದೆ. ಸಾಂಗತ್ಯರೂಪ ಕೂಡ ಹಸ್ತಪ್ರತಿಗಳ ಮಾಧ್ಯಮವಾಯಿತು. ಷಟ್ಪದಿ ಮತ್ತು ಸಾಂಗತ್ಯ ರೂಪಗಳುಹೀಗೆ ಪೈಪೋಟಿ ನಡೆಸುತ್ತಿರುವಾಗಲೆ ವೈದಿಕರಲ್ಲಿ ಕೀರ್ತನವೆಂಬ ವಿಶಿಷ್ಟ ರೂಪಕೂಡಾ ಚಾರಿಗೆ ಬಂತು. ಬಹುಶಃ ತಮ್ಮನೀತಿ ಬೋಧನೆಗಳನ್ನು ಪಂಡಿತ ಮಂಡಲಿಯಿಂದ ದೂರವಾಗಿ ಜನಸಾಮಾನ್ಯರಿಗಾಗಿಯೆ ತಿಳಿಸುವ ಉದ್ದೇಶದಿಂದ ಹೀಗಸರಳ ಅಭಿವ್ಯಕ್ತಿ ರೂಪವಾದ ಕೀರ್ತನ ಕನಕ, ಪುರಂದರದಾಸ ಮುಂತಾದವರ ಅಭಿವ್ಯಕ್ತಿಯ ವಾಹಕವಾಯಿತು.

ಜೈನ,ವೀರಶೈವ ಹಸ್ತಪ್ರತಿಗಳಿಗಿಂತ ವೈದಿಕ ಹಸ್ತಪ್ರತಿಗಳು ಮೊದಲು ರೂಪಗೊಂಡಿದ್ದು ಉತ್ತರ ಕರ್ನಾಟಕದಲ್ಲಿಯೆ.ಹಿಂದೂ ಸಂಸ್ಕೃತಿಯ ಪ್ರತೀಕವೆಂದು ಹೇಳುವ ವಿಜಯನಗರ ಮಹಾ ಸಾಮ್ರಾಜ್ಯ ಕೂಡಾ ತಲೆ[ ]ಯೆತ್ತಿದ್ದು ಉತ್ತರ ಕರ್ನಾಟಕದಲ್ಲಿಯೆ.ಹೀಗಾಗಿ ಈ ಪರಂಪರೆ ಹಂಪೆಯ ಸುತ್ತ ಮುತ್ತ ಹುಟ್ಟಿದ ಕಾರಣ ಈ ಪರಂಪರೆಯ ಹಸ್ತಪ್ರತಿಗಳು ಇಲ್ಲಿಯೆ ವಿಶೇಷವಾಗಿ ದೊರೆಯುತ್ತವೆ. ಮುಂದೆ ಹರಿದಾಸ ಆಂದೋಲನ ಹಂಪೆಯ ರಾಜಪ್ರಭುತ್ವದಿಂದ ರಾಯಚೂರಿನ ಪಾಳೆಗಾರಿ ಆಶ್ರಯಕ್ಕೆ ವರ್ಗವಾಯಿತು. ಆದ್ದರಿಂದ ಕೀರ್ತನ ರೂಪದ ಹಸ್ತಪ್ರತಿಗಳುರಾಯಚೂರಿನ ಪರಿಸರದ ಸುತ್ತ ಮುತ್ತ ವಿಪುಲ ಪ್ರಮಾಣದಲ್ಲಿ ದೊರೆಯುತ್ತವೆ. ಒಟ್ಟು ವೈದಿಕ ಹಸ್ತಪ್ರತಿಗಳು ಉತ್ತರ ಕರ್ನಾಟಕಪ್ರಮುಖ ಭಾಗಗಳಾದ ಹಂಪೆ,ಬಳ್ಳಾರಿ,ರಾಯಚೂರು, ತೆಕ್ಕಲಕೋಟೆ ಇತ್ಯಾದಿ ಪ್ರದೇಶಗಳಲ್ಲಿ ಈಗಲೂಲಭ್ಯವಾಗುತ್ತವೆ. ಆದಷ್ಟುತೀವ್ರವಾಗಿ ವೈದಿಕ ಹಸ್ತಪ್ರತಿಗಳನ್ನು ಈ ಪ್ರದೇಶದಲ್ಲಿ ಶೋಧಿಸುವ ಕಾರ್ಯನಡೆದರೆ ಆ ಪರಂಪರೆಗೆ ಸಂಬಂಧಿಸಿದ ಅನೇಕ ಒಳನೋಟಗಳು ತಿಳಿಯುವ ಸಾಧ್ಯತೆಗಳಿವೆ.

ರಾಮಾಯಣ:

ರಾಮಾಯಣದ ಕತೆಯನ್ನು ತಮ್ಮ ಆಲೋಚನೆ, ಚಿಂತನೆಗಳಿಗೆ ಹೊಲಿಸಿಕೊಂಡು ಬ್ರಾಹ್ಮಣ ಕವಿಗಳು ಹಸ್ತಪ್ರತಿಗಳನ್ನು ರಚಿಸಿದರು. ಈ ಬಗೆಯ ರಚನೆಗೆ ಜೈನ ಸಿದ್ಧಮಾದರಿಯೇ ಪ್ರೇರಣೆಯಾಯಿತು. ಆದರೆ ಕಥೆ ಹೇಳುವ ಮಾದರಿ ಮತ್ತು ರೂಢಿಗೊಳಿಸಿದ ರೂಪಗಳು ಮಾತ್ರ ಬೇರೆಯಾದವಲ್ಲದೆ ಕೆಲವೊಮ್ಮೆ ಬ್ರಾಹ್ಮಣದ್ವೆ ಎನ್ನಬಹುದಾದ ರೂಪಗಳು ಚಾರಿಗೆ ಬಂದವು. ಬ್ರಾಹ್ಮಣ ಕವಿಗಳು ಒಂದೊಂದು ರೂಪದಲ್ಲಿಯೇ ಓದುಗವರ್ಗವನ್ನು ನಿರ್ಮಾಣ ಮಾಡುವಷ್ಟು ಶಕ್ತಿಯನ್ನು ಹೊಂದಿದ್ದರೆಂಬುದಕ್ಕೆ ನಾಗರಸನ 'ಭಗವದ್ಗೀತೆ'ಹಸ್ತಪ್ರತಿಯನ್ನು ಗಮನಿಸಬಹುದು. ಹಸ್ತಪ್ರತಿ ಭಾಮಿನಿಷಟ್ಪದಿ ರೂಪದಲ್ಲಿದ್ದು ಕ್ರಿ.ಶ ೧೬೫೦ರಲ್ಲಿ ನಿರ್ಮಾಣವಾಗಿದೆ.ಹಸ್ತಪ್ರತಿಯ ಆರಂಭದಲ್ಲಿ ತನ್ನ ಕೃತಿ ಷಟ್ಪದಿ ಓದುವವರಿಗೆ ಮಾತ್ರ ಎಂಬುದನ್ನು ಆತ್ಮೀಯವಾಗಿಯೆ ಹೇಳಿಕೊಳ್ಳುತ್ತಾನೆ.

ಆದಿ: ಶ್ರೀ ಭಗವದ್ಗೀತೆ ಷಟ್ಪದಿ ಅರ್ಜುನನಿಗೆ ಕೃಷ್ಣಸ್ವಾಮಿ ವುಪದೇಶಿಸಿದ ಸಂಸ್ಕೃತ ಭಗವದ್ಗೀತೆ ಯನ್ನು ಕನ್ನಡಿಸಿದ ಕನ್ನಡ ಭಗವದ್ಗೀತೆಯನ್ನು ಷಟ್ಪದಿಯವ್ರೋದುವ ಮೇರೆಗೆ ವ್ರೋದುವ ಭಗವದ್ಗೀತೆಗೆ ಮಂಗಳ ಮಹಾಶ್ರೀ ಶುಭಮಸ್ತು"

ಹೀಗೆ ವೈದಿಕರು ಕಥಾ ವಸ್ತುವಿನಲ್ಲಿ ಮಾತ್ರವಲ್ಲ ರೂಪ ನಿರ್ಮಾಣದ ಸಂದರ್ಭದಲ್ಲಿಯೂ ಮಾರ್ಪಾಡು ಮಾಡಿಕೊಂಡಿದ್ದಾರೆ. ಆ ಹೊತ್ತಿನ ಜನಸಮುದಾಯದ ತುರ್ತಿನ ಬಗ್ಗೆ ಇವರಿಗಿರುವ ಪ್ರಜ್ಞೆ ಕಾಳಜಿಯನ್ನು ಮೇಲಿನ ಹಸ್ತಪ್ರತಿ ಸೂಚಿಸುತ್ತದೆ. ಭಾಮಿನಿಷಟ್ಪದಿ ರೂಪದ ಕ್ರಿಶ ೧೭೫೦ರಲ್ಲಿ ತಿಮ್ಮಾಮತ್ಯ ಕವಿಯಿಂದ ರಚಿತವಾದ "ರಾಮಾಭ್ಯುದಯ ಕಥಾ ಕುಸುಮಾಂಜರಿ' ಹಸ್ತಪ್ರತಿ ರಾಮಾಯಣದ ಕಥೆಯ ಜೊತೆಗೆ ಕೆಲ ಅವತಾರಗಳನ್ನು ತಿಳಿಸುವಹಸ್ತಪ್ರತಿಯಾಗಿದೆ."ಇದು ಇತರ ರಾಮಾಯಣಗಳ ಕಥಾಸಾರವನ್ನೆಲ್ಲಾ ಒಳಗೊಂಡಿರುವದಲ್ಲದೆ ವರಾಹ ನೃಸಿಂಹಾವತಾರಗಳ ಮತ್ತು ರಾವಣ ಕಥೆಯನ್ನು ಸಹ ಬಾಲಕಾಂಡದಲ್ಲಿಯೇ ಸೇರಿಸಿ ಉತ್ತರ ಕಾಂಡದಲ್ಲಿ ಶ್ರೀ ರಾಮನ ದಿಗ್ವಿಜಯ, ಅಶ್ವಮೇದ ಮೊದಲಾದ ಕಥೆಗಳನ್ನು ಸೇರಿಸಿ ರಚಿಸಲ್ಪಟ್ಟಿದೆ." (ಆರ್ ನರಸಿಂಹಾಚಾರ್ ೧೯೩೪;೩೩)

ಸಮಗ್ರ ರಾಮಾಯಣ ಕಥೆಯಲ್ಲಿ ದಾಸರು ಬಾಲಕಾಂಡದ ಶ್ರೀ ರಾಮ ಜನನ, ಅಹಲ್ಯೆಯ ಉದ್ಧಾರ, ಶಿವಧನುಜಣಗ,ಸೀತಾಕಲ್ಯಾಣ ಈ ನಾಲ್ಕು ಮುಖ್ಯ ಪ್ರಸಂಗಗಳಿಂದ ತಮ್ಮ ಸಾಮಗ್ರಿಯನ್ನು ರೂಪಿಸಿಕೊಂಡಿದ್ದಾರೆ. ಈ ಅಭಿವ್ಯಕ್ತಿಗೆಲವರು ಬಳಸಿಕೊಂಡ ರೂಪಗಳೆಂದರೆ ಷಟ್ಪದಿ ಮತ್ತು ಸಾಂಗತ್ಯಗಳು. ಕನಕದಾಸರ ರಾಮಧ್ಯಾನ ಚರಿತ್ರೆ, ಮೋಹನ ತರಂಗಿಣಿಗಳು ಪೂರ್ಣಪ್ರಮಾಣದಲ್ಲಿ ಅರಳಿಕೊಂಡಿದ್ದು ಷಟ್ಪದಿಯಲ್ಲಿ. ವೀರಶೈವರಲ್ಲಿ ವಚನ ಮೊದಲ ಶ್ರೇಣಿಯ ರೂಪವಾದರೆ ವೈದಿಕದಲ್ಲಿ ಷಟ್ಪದಿ ಮೊದಲನೆ ಶ್ರೇಣಿಯ ರೂಪವಾಗಿ ತನ್ನ ವೈವಿಧ್ಯತೆಯನ್ನು ಪಡೆಯಿತು.

**ಮಹಾಭಾರತ:**

ಮಹಾಭಾರತದ ಕಥೆಯನ್ನು ವೈದಿಕರು ಎರಡು ಬಗೆಯ ನೆಲೆಯಲ್ಲಿ ಸ್ವೀಕರಿಸಿದರು. ಒಂದು ಕೇವಲ ಕೃಷ್ಣಾರ್ಜುನರ ಯುದ್ಧವನ್ನು ವರ್ಣಿಸುವ ಭಗವದ್ಗೀತೆ ಮಾದರಿಯನ್ನು. ಇನ್ನೊಂದು; ಮಹಾಭಾರತ ಪ್ರಸಂಗದ ಬೇರೆ ಬೇರೆ ಕತೆಗಳನ್ನು ವರ್ಣಿಸಲು. ಮೊದಲನೆ ಮಾದರಿಯ ಭಗವದ್ಗೀತೆ ವಿಷಯ ವೈದಿಕರಲ್ಲಿ ವಿಪುಲವಾಗಿ ಬೆಳೆದುಬಂದಿದೆ.ಹಲವಾರು ಕವಿಗಳು ಬೇರೆ ಬೇರೆ ರೂಪಗಳನ್ನು ಬಳಸಿಕೊಂಡು ಹಸ್ತಪ್ರತಿ ನಿರ್ಮಾಣಕ್ಕೆ ತೊಡಗಿದರು. ಕುಮಾರ ವ್ಯಾಸ,ಲಕ್ಷ್ಮೀಶ ಈ ಮುಂತಾದ ಹಿರಿ ಕವಿಗಳ ದಾರಿಯಲ್ಲಿ ಮುಂದಿನ ಕವಿಗಳು ನಡೆದ ಪರಿಣಾಮವಾಗಿ ವೈದಿಕರಿಗೆಮಹಾಭಾರತ ಒಂದು ದೃಢ ಸಂಕಲ್ಪದ ವಿಷಯವಾಯಿತು. ಮಹಾಭಾರತದ ಪ್ರಸಂಗವೊಂದನ್ನಾಯ್ದುಕೊಂಡು 'ಅಂಬಿಕಾವಿಜಯ'' ವೆಂಬ ಹಸ್ತಪ್ರತಿಯನ್ನು ನಿರ್ಮಾಣಮಾಡಿದ ಬಬ್ಬೂರು ರಂಗ ಕ್ರಿ ಶ ೧೭೫೦ ರಲ್ಲಿದ್ದ ಕವಿ. ಈತಕುಮಾರವ್ಯಾಸ ಲಕ್ಷ್ಮೀಶ, ಕುಮಾರವಾಲ್ಮೀಕಿ, ಮತ್ತು ತಾನು ಈ ನಾಲ್ವರೆ ಕನ್ನಡ ಕವಿಗಳಲ್ಲಿ 'ಕೃತಿ ಸೃಜಿಸುವ ಅತಿಬಗ್ಗಜರು, ತಮಗಿದಿರಾರು ಧರಣಿಯಲಿ"ಎಂದು ಆತ್ಮಾಭಿಮಾನದಿಂದ ಹೇಳಿಕೊಳ್ಳುತ್ತಾನೆ. ಹೀಗಾಗಿ ಈತ ಆರಂಭದಲ್ಲಿ ಕುಮಾರವ್ಯಾಸನ ಅಭಿವ್ಯಕ್ತಿ ಮಾದರಿಯನ್ನು ಅನುಸರಿಸಿ ಹಸ್ತಪ್ರತಿ ರಚಿಸಿದ್ದಾನೆ.

ಅಗ್ಗಳಿಕೆ ಪರರನುಸರಿಸದೊಂ
ದಗ್ಗಳಿಕೆ ಭಾಮಿನಿಯ ಷಟ್ಪದಿ
ಮುನ್ನಿಸದೆ ಕರಪುಸ್ತಕದ ಪದಗಳನ್ನು ನಿರ್ಮಿಸುವ।
ಉಗ್ಗಡಿಸದಗ್ಗಳಿಕೆ ತನ್ನದ
ನರ್ಥವಾಕ್ಯದೊಳರ್ಥ ವಿಕಳತೆ
ನುಗ್ಗಿ ನಿಲಿಸಿದ ಬಿರುದು ಬಬ್ಬೂರೀಶ ಸೇವಕಗೆ॥

ಮಹಾಭಾರತ ಕುರಿತಾದ ವಿಷಯ ಭಾಮಿನಿಷಟ್ಪದಿ ರೂಪದಲ್ಲಿ ಅಭಿವ್ಯಕ್ತಗೊಂಡಿದ್ದು ವೈದಿಕರಲ್ಲಿ ಮಾತ್ರ. ಅಂದರೆ ಷಟ್ಪದಿ ಈ ವೇಳೆಗಾಲೇ ಬಹುಮುಖ್ಯರೂಪವಾಗಿ ಬೆಳೆದಿರಬೇಕು. ಜನಸಾಮಾನ್ಯರು, ಓದುಗವರ್ಗ ಈ ಬಗೆಯ ರೂಪಕ್ಕೆ ಹಾತೊರೆಯುತ್ತಿದ್ದ ಸಂದರ್ಭಕೂಡಾ ಉಂಟಾಗಿರುವ ಸಾಧ್ಯತೆಯಿರುವದರಿಂದ ಈ ರೂಪದಲ್ಲಿ ಅನೇಕ ಹಸ್ತಪ್ರತಿಗಳು ನಿರ್ಮಾಣವಾದವು. ಕ್ರಿಶ ೧೭೨೩ ಲಕ್ಷ್ಮೀಕವಿ ಭಾರತ'ವೆಂಬ ಹಸ್ತಪ್ರತಿ ವ್ಯಾಸರನ್ನು ಅನುಸರಿಸಿದ್ದ ಬಗ್ಗೆ ಸೂಚಿಸುತ್ತದೆ.ಆರಂಭದಲ್ಲಿ ನಂಜುಂಡೇಶ್ವರನ ಸುತ್ತಿಯಿದೆ.

ಶ್ರೀ ನಂಜುಂಡೇಶ್ವರ ಸ್ವಾಮಿಯವರ ದಿವ್ಯ
ಶ್ರೀ ಪಾದಾರವಿಂದವೆ ಗತಿ ೧ ಶುಭಮಸ್ತು.
ಲೋಕತ್ರಯಂ ತನ್ನ ಶೋಘಮೆಂದನು ಬಾಣ
ಸಾಕುಳಿದ ಕವಿಗಳೆಂಣಿಸುವೆನೆನೆಯಿಂದ ನಂ
ದಾಕುಮಾರ ವ್ಯಾಸನವರ ನುಡಿಯುಂನತೆಯ ಕೈಗೊಂಡು ಬಗಪುರದೊಳು

ಇದೇ ಬಗೆಯ ಹಸ್ತಪ್ರತಿಗಳು ವೈದಿಕ ಸಂದರ್ಭದಲ್ಲಿ ನಿರ್ಮಾಣವಾಗಿವೆ.

ಭಾಗವತ:

ಬಾಗವತ ಸಾಕ್ಷಾತ್ ಶ್ರೀಹರಿಯ ಲೀಲಾಕಥನವೇ ಆಗಿದೆ. ಆದ್ದರಿಂದ ವಿಷ್ಣುಭಕ್ತಿಯ ಆಕರಗಳಾಗಿರುವ ಭಾಗವತಪ್ರಕಾರದ ಪುರಾಣಗಳು ವೈದಿಕರಿಗೆ ಅನುಸರಣೀಯದವು. ವೈದಿಕರು ಭಾಗವತ ಪುರಾಣಕ್ಕೆ ಹೆಚ್ಚಿನ ಪ್ರಶಸ್ತ ಕೊಟ್ಟು ಜನರ ಆಧ್ಯಾತ್ಮಿಕ ಶಿಕ್ಷಣಕ್ಕೆ ಅದನ್ನು ವಿಶೇಷ ರೀತಿಯಲ್ಲಿ ಬಳಸಿಕೊಂಡರು. ಈ ಬಳಕೆ ಮಧ್ಯಕಾಲೀನದಲ್ಲಿ ವೈದಿಕ, ವೈಷ್ಣವ ಮತ್ತು ಸಂತರ ಮೂಲಕ ನಡೆಯಿತು. ಸಾಮಾನ್ಯ ಜನರಿಗೆ ವೇದೋಕ್ತ ತತ್ವಗಳನ್ನು ಬೋಧಿಸುವುದು ಇವರೆಲ್ಲರ ಪ್ರಮುಖ ಉದ್ದೇಶವಾಗಿತ್ತು. ಆದ್ದರಿಂದಲೇ ಮದ್ವಾಚಾರ್ಯರು ತಾವು ರಚಿಸಿದ ಗ್ರಂಥಗಳಲ್ಲಿ 'ಭಾಗವತತ್ಪರ್ಯ'ಗಳಿಗೆ ವಿಶೇಷ ಸ್ಥಾನವುಟ್ಟು. ಭಾಗವತದ ಉದ್ದೇಶ ಈ ಜಗತ್ತಿನ ನಿಗೂಢತೆಯನ್ನು ವಿವರಿಸುವುದು. ಪ್ರಪಂಚ,ಸೃಷ್ಟಿ,ಇವುಗಳ ವಿಶಿಷ್ಟ ಸಂಗತಿಗಳನ್ನು ವೈದಿಕ ಹಿನ್ನೆಲೆಯಲ್ಲಿ ಪರಿಚಯಿಸುತ್ತದೆ. ಕ್ರಿಶ ೧೮೫೦ ರಲ್ಲಿ ಗದ್ಯರೂಪದಲ್ಲಿ ನಿರ್ಮಾಣವಾದ ನಾರಯಣ ಕವಿಯ 'ಭಾಗವತ'" ಹಸ್ತಪ್ರತಿ ವಿಶಿಷ್ಟ ಬಗೆಯದು.

ಆದಿ: ಶುಭಮಸ್ತು , ಶ್ರೀ ಮದ್ಭಾಗವತವನ್ನು ವಾಕ್ಯರೂಪಿನಲ್ಲಿ ಬರೆವುದಕ್ಕೆ
ಆಯುರಾರೋಗ್ಯ ಅಯಿಶ್ವರ್ಯಮಸ್ತು , ಶ್ರೀ ಮದ್ಭಾಗವತ ಮಹಾಪುರಾಣವನ್ನು
ಕರ್ನಾಟಕ ಭಾಷಾ ಧ್ವನಿಯಿಂದ ನನ್ನ ವಂತಿಗೆ ಗೋಚರವಾದಂತೆ
ಅಂತರತ್ಮನಾದ ಶ್ರೀ ವಾಸುದೇವ ಪ್ರೇರಣೆಯಿಂದ ವಿಸ್ತಾರವಾಗಿ
ಅಭಿವರ್ನ್ನಿಸುತ್ತಂಯಿ ಹೆನೂ ಈ ಶ್ರೀ ಮದ್ಭಾಗವತ
ಸಂಹಿತಾರ್ಥತಾತ್ಪರ್ಯ್ಯವು ಕನ್ನಡದ ಭಾಷಾ ಪದ್ದತಿಯೊಂದು ತಿಳಿದಿಂ
ಅರಣಿವುಳ್ಳವರನುಜ್ಞೆಯಲ್ಲಿ ಶ್ರೀ ಮದ್ಭಾಗವತ ರಹಸ್ಯವನು
ಅಬಿವರ್ನ್ನಿಸುತ್ತಾಂಯಿಹೆನು ||

ಈ ಹಸ್ತಪ್ರತಿ ಪ್ರಪಂಚ, ಸೃಷ್ಟಿ,ಸೂರ್ಯ,ಚಂದ್ರ ವಂಶದ ರಾಜರ ಕಥೆಯನ್ನು ತುಂಬಾ ಅರ್ಥಪೂರ್ಣವಾಗಿ ವಿವರಿಸುತ್ತದೆ.ಇಲ್ಲಿ ಕವಿ ಸೂಚಿಸುವ 'ಕರ್ನಾಟಕ ಭಾಷಾಧ್ವನಿಯನ್ನು' ಮಧ್ಯಕಾಲೀನ ಕರ್ನಾಟಕದ ಭಾಷಾ ಅವಸ್ಥೆಯ ಹಿನ್ನೆಲೆಯಲ್ಲಿಗಮನಿಸಬಹುದಾಗಿದೆ.

ಇದೇ ಬಗೆಯ ವಸ್ತುವಿವರವನ್ನು ತಿಳಿಸುವ ಇನ್ನೊಂದು ಹಸ್ತಪ್ರತಿ ಚಾಟುವಿಠಲನಾಥನ 'ಭಾಗವತ'" ಇದು ಕ್ರಿ. ೧೪೩೦ ರಲ್ಲಿ ಭಾಮಿನಿಷಟ್ಪದಿಯಲ್ಲಿ ನಿರ್ಮಾಣವಾಗಿದೆ. ಆರಂಭದಲ್ಲಿ ಶ್ರೀ ವಾಸುದೇವನ ಸ್ಮರಣೆಯಿದೆ.

ಆದಿ: ಶ್ರೀ ಗಣಾಧಿಪತಿಯೇ ನಮಃ ಶ್ರೀ ಮದ್ಭಾಗವತ ಬರವುದಕ್ಕೆ ಶುಭಮಸ್ತು
ಪ್ರಥಮಾರಭ್ಯವಾಗಿ ಬರದಂತ್ಹಾ ಶ್ರೀ ವಾಸುದೇವನ ಸ್ಮರಣೆಯ
ಪುಸ್ತಕಕ್ಕೆಶುಭಮಸ್ತು. ಭಾಮಿನಿಷಟ್ಪದಿ

---

ಪಲ್ಲ ಸೂತನರುಹಿದನಣಧಿಕ ಗುಣ ವಿ
ಖ್ಯಾತ ಶೌನಕ ಮುಖ್ಯ ಮುನಿಗಳ
ಗೋತು ಪರಮರಹಸ್ಯವನು ವರ ಭಾಗವತ ಸಂಹಿತಯ

ಹೀಗೆ ಭಾಗವತ ಪರಂಪರೆಯಲ್ಲಿ ವೈದಿಕ ಕವಿಗಳಿಂದ ನಿರ್ಮಾಣಗೊಂಡ ಹಸ್ತಪ್ರತಿಗಳು ಭಕ್ತಿಯನ್ನು ವೈಧೀಕರಿಸುವುದರಮೂಲಕ ಆಧ್ಯಾತ್ಮಿಕ ಶಿಕ್ಷಣಕ್ಕೆ ಬೇಕಾದ ಭೂಮಿಕೆಯನ್ನು ಸಿದ್ದಪಡಿಸುತ್ತಿದ್ದವು. ಆದರೆ ಈ ಭೂಮಿಕೆ ಪಂಡಿತೋತ್ತಮರಿಗಾಗಿಯೇ ಇತ್ತೆ ಹೊರತು ಜನಸಾಮಾನ್ಯರಿಗಿರಲಿಲ್ಲವೆಂಬುದು ಈ ಹಸ್ತಪ್ರತಿಗಳ ವರ್ಗಸಂಬಂಧ ಪ್ರಶ್ನೆಯನ್ನು ತಿಳಿಸುತ್ತದೆ.

ವಿಷ್ಣುಭಕ್ತಿ:

ವೈದಿಕ ಹಸ್ತಪ್ರತಿಗಳಿಗೆ ಮೂಲ ಪ್ರೇರಣೆಯಾದದ್ದು ಭಕ್ತಿಯೆಂಬುದಂತು ನಿಜವಾದರೂ ಅದು ವಿಷ್ಣುಭಕ್ತಿಯೇ,ದ್ವೈತ ದೃಷ್ಟಿಯದೆ ಎಂಬುದು ಸಂದೇಹವಾಗಿದೆ. ಯಾಕೆಂದರೆ ವಿಷ್ಣು ದೇವತೆಯನ್ನು ಅತ್ಯಂತ ಶ್ರೇಷ್ಠದೇವತೆಯೆಂದುಪೂಜಿಸುವವರೇ ವೈಷ್ಣವರು. ಯಾವ ವ್ಯಕ್ತಿ ಈ ವಿಷ್ಣುವನ್ನು ಅಥವಾ ಹರಿಯನ್ನು ದಾಸ್ಯಭಾವದಿಂದ ಪೂಜಿಸುವನೋ,ಯಾವನು ಭಜಿಸುವನೋ ಆತ ಹರಿದಾಸನೆಂದು ಸಾಮಾನ್ಯವಾಗಿ ನಂಬಲಾಗಿರುವ ಸಂಗತಿ. ಈಗ "ಹರಿದಾಸ ಸಾಹಿತ್ಯದಇತಿಹಾಸವನ್ನು ಕೆಲವು ವಿದ್ವಾಂಸರು ಮದ್ವಾಚಾರ್ಯರ ಸಾಕ್ಷಾತ್ ಶಿಷ್ಯರಾದ ನರಹರಿತೀರ್ಥರಿಂದ ಆರಂಭಿಸಿದರೆ ಮತ್ತೆ ಕೆಲವರು ಶ್ರೀ ಪಾದರಾಯರಿಂದ ಆರಂಭಿಸುತ್ತಾರೆ"(ಸೀತಾರಾಮ್ ಜಾಗೀರ್ ದಾರ್ ;೧೯೮೪;೨) ಆದ್ದರಿಂದ ವಿಷ್ಣುಭಕ್ತಿ ಕುರಿತಾದ ಹಸ್ತಪ್ರತಿಗಳ ಬರಹವನ್ನು ಯಾರು ಮೊದಲು ಪ್ರಾರಂಭಿಸಿರಬೇಕೆಂಬುದು ಖಚಿತವಾಗಿ ತಿಳಿದಿಲ್ಲ. ಪುರಂದರದಾಸರು ತಮ್ಮ ಒಂದು ಕೀರ್ತನೆಯಲ್ಲಿ ವಿಷ್ಣುಭಕ್ತಿಯ ಸ್ವರೂಪವನ್ನು ಹೀಗೆ ವರ್ಣಿಸಿದ್ದಾರೆ.

(ಉದೃತ: ಎಚ್ಚೆಸ್ಕೆ ೧೯೮೪); ಕೃಷ್ಣ ಮಂತ್ರವ ಜಪಿಸೋ ಎ ಮನುಜ.
ಕೃಷ್ಣ ಮಂತ್ರ ಜಪಿಸೊ
ವೈಷ್ಣವೋತ್ತಮನಾಗಿ
ವಿಷ್ಣುವೇ ಗತಿಯೆಂದು.

ವಿಷ್ಣುವನ್ನು ವೈಷ್ಣವರು ಮಾತ್ರ ಭಜಿಸುವ ಸಂಗತಿ ಪುರಂದರಸಾಸರ ಈ ಕೀರ್ತನೆಯಲ್ಲಿ ಸ್ಪಷ್ಟವಾಗಿದೆ. ಮುಂದೇಇದೇ ಪರಂಪರೆಯಲ್ಲಿ ಚಿಕ್ಕುಪಾದ್ಯಾಯ, ಕನಕದಾಸ, ಚಾಟುವಿಠಲನಾಥ ಮುಂತಾದವರು ವಿಷ್ಣು ಮಹಿಮೆಯನ್ನು ಕೊಂಡಾಡಿದ್ದಾರೆ. ವಿಷ್ಣುಭಕ್ತಿಯನ್ನು ಕುರಿತು ಬರೆಯುವ ಹಸ್ತಪ್ರತಿ ಪರಂಪರೆಯಲ್ಲಿ ಚಿಕ್ಕುಪಾಧ್ಯಾಯನದು ಪ್ರಮುಖವಾದ ಹೆಸರು. ಕ್ರಿಶ

೧೬೭೭ರಲ್ಲಿ ನಿರ್ಮಾಣಗೊಂಡ ವಿಷ್ಣುಪುರಾಣ' ವೆಂಬ ಹಸ್ತಪ್ರತಿಗೆ ಬಳಕೆಯಾದ ರೂಪ ಚಂಪು.ಆರಂಭದಲ್ಲಿ ವಿಷ್ಣುಸ್ತುತಿ ಇದೆ.

ಧರಣೀಶಂ ಚಿಕದೇವರಾಜನೊಲವಿಂದಾ ಸಂಸ್ಕೃತ ಪ್ರೋಕ್ತ ವಿ
ಸ್ಫುರಿತಂ ವಿಷ್ಣು ಪುರಾಣಮಂ ಸುಲಲಿತಂ ಕರ್ನಾಟಕದೊಳ್ವಸ್ತುಕೋ
ತ್ಕರದೀ ಪೆಳೆನು ರಂಗಪಂಡಿತ ಕುಮಾರುನು ಪಾರುಕಾತ್ಸಿನ್ನಯಂ
ವರಲಕ್ಷ್ಮೀಪತಿ ನಾಮಧೇಯ ಚಿಕುಪಾಧ್ಯಾಯಾಖ್ಯೆಯಿಂ ವಿಶ್ರುತಂ ೨೪೨
ಕ್ರಮದಿಂದೊಪ್ಪುವ ಶಾಲಿವಾಹನ ಶಕಾಬ್ದಂ ವಂಹ್ನಿ ಚಂದ್ರರ್ತು ಚಂ
ದ್ರಮ ಸಂಖ್ಯಾಲಶಿತ ಪ್ರಮೋದ ಶರ ಮದ್ಯತ್ವಾಲ್ಗುಣಂ ಸ್ವೇತ
ಪಂಚಮಿಯಾ ಭಾಸ್ಕರವಾರದಲ್ಲಿ ವರಕರ್ನಾಟೋಕ್ತಿಯಿಂ ತಳ್ತ ತ
ತ್ವಮಯಂ ವಿಷ್ಣುಪುರಾಣಮಂ ರಚಿಸಿದಂ ಪೂರ್ಣಂ ಜಯಂಮಂಗಳ

ಹೀಗೆ ಚಕ್ಕುಪಾದ್ಯಾಯ ಅತ್ಯಂತ ವಿಸ್ತಾರದಲ್ಲಿ ವಿಷ್ಣು ಮಹಿಮೆಯನ್ನು ಕುರಿತಾದ ಹಸ್ತಪ್ರತಿಗಳನ್ನು ರಚಿಸಿದ್ದಾನೆ. ಯಕ್ಷಗಾನ ರೂಪದಲ್ಲಿ ಕ್ರಿ.ಶ. ೧೮೮೧ ರಲ್ಲಿ ನಿರ್ಮಾಣವಾದ ವಿಶಿಷ್ಟ ಹಸ್ತಪ್ರತಿ ಶ್ರೀನಿವಾಸ ಕವಿಯ 'ಹರಿಲೀಲಾವಿಲಾಸ'[೯]ಆರಂಭದಲ್ಲಿ ಹರಿಯನ್ನು ಕುರಿತ ಸ್ತುತಿ ಇದೆ.

ಕುರುಣದಿ ಪೊರೆ ನಿರತ ಹರಿಯೆ ನೀಂ
ಪಾಲಿತ ಮುನಿಜನ ಕಾಲಕಾಲರ್ಜಿತ
ನೀಲಮೇಘಾ ಭಿ ಶ್ರೀಲೋಲನೆ ನೀಂ
ಮೀನಾಧ್ಯನಂತವತಾರವ ಧರಿಸುತ
ದೀನರಮೊರೆಯುತಲಿ
ಮಾನುಷನಾದಹಿವರ್ಯ ಸೇವಿತನಾದ
ಶ್ರೀನಿವಾಸಗೆ ಸರ್ವ ಲೋಕೈಕನಾಥಗೆ

ಈ ಹಸ್ತಪ್ರತಿ ವಿಷ್ಣುವಿನ ಮಹಿಮೆಯನ್ನು ವಿವರಿಸುತ್ತದೆ. ವರ್ಣ ಚಿತ್ರಗಳ ಮೂಲಕವೂ ವಿಷ್ಣುವಿನ ಮಹತ್ವವನ್ನುತಿಳಿಸುವ ಕೆಲ ಅಪರೂಪದ ಹಸ್ತಪ್ರತಿಗಳಿವೆ. ಮೈಸೂರು ಪ್ರಾಚ್ಯ ವಿಧ್ಯಾ ಸಂಶೋಧನಾಲಯ (Orientad Research Institute) ದಲ್ಲಿ 'ಶ್ರೀ ತತ್ವನಿಧಿ' ಎಂಬ ಅಪರೂಪದ ಗ್ರಂಥವಿದೆ. ಈ ಗಂಥವನ್ನು ಕನ್ನಡ ಹಸ್ತಪ್ರತಿಯೆಂದೆ ಪರಿಗಣಸಲಾಗಿದೆ. ಇದನ್ನು ಹಂಪಿಯ ಕನ್ನಡವಿಶ್ವವಿದ್ಯಾಲಯ ಸುಂದರವಾಗಿ ಪ್ರಕಟಿಸಿದೆ. ಇದರಲ್ಲಿ ಶಕ್ತಿನಿಧಿ, ಶಿವನಿಧಿ, ವಿಷ್ಣುನಿಧಿ, ಎಂದು ಮುಂತಾಗಿ ಒಂಬತ್ತುಪ್ರಕರಣಗಳಿವೆ.ವಿಷ್ಣುವಿನ ಪ್ರಾರ್ಥನಾಶ್ಲೋಕ, ವಿವಿಧ ಲೀಲೆಗಳ, ಅವತಾರಗಳ ವರ್ಣರಂಜಿತ ಕಲಾತ್ಮಕ ಚಿತ್ರಗಳುಂಟು. ಅರಮನೆಯಲ್ಲಿದ್ದ ತಿಪ್ಪಯ್ಯ ಎಂಬ ಕಲೆಗಾರನು ಈ ಚಿತ್ರಗಳನ್ನು ಬರೆದಿರುವನೆಂದು ಗೊತ್ತಾಗಿದೆ.

**ನೀತಿಬೋಧಕ ಕೀರ್ತನೆಗಳು:**

ವೈದಿಕ ಪರಂಪರೆಯಲ್ಲಿಯೇ ಕೀರ್ತನ ರೂಪಕ್ಕೆ ಮಹತ್ವದ ಸ್ಥಾನವಿದೆ. ಕನ್ನಡ ಸಮಾಜದಲ್ಲಿ ಈ ಕೀರ್ತನ ಸಾಹಿತ್ಯಪ್ರತ್ಯೇಕಿಸಲಾಗದ ಸಂಬಂಧವನ್ನು ಹೊಂದಿರುವ ವಿಶಿಷ್ಟರೂಪ. ಕನ್ನಡದಲ್ಲಿ ಭಗವಂತ ಮತ್ತು ಭಕ್ತನ ನಡುವಿನ

ಗಾಢತೆಯನ್ನು ಅತ್ಯಂತ ಭಾವನಾತ್ಮಕವಾಗಿ ಕೀರ್ತನ ವರ್ಣಿಸುತ್ತವೆ. ಎಚ್ .ಎಸ್ .ವೆಂಕಟೇಶಮೂರ್ತಿಯವರು ಅಭಿಪ್ರಾಯಪಡುವಂತೆ ``ಕೀರ್ತನೆಗಳ ಮುಖ್ಯ ಭಾವ ಭಕ್ತಿ. ಈ ಭಕ್ತಿ ಪರದೇವ ನಿಷ್ಠೆಯಿಂದಾಗಿ ಹುಟ್ಟಿಹೋಗದೆ ಗಾಢವಾಗುವಂಥದ್ದು. ವಿಶ್ವದ ಮೂಲಭೂತ ಸತ್ಯದ ಅರಿವಿಗೆ ಈ ಭಕ್ತಿ ಮಾರ್ಗ ಸುಲಭವೆಂಬುದು ಕೀರ್ತನಕಾರರ ಒಟ್ಟು ದಾಟಿ. ತಮ್ಮ ಇಷ್ಟದೈವವನ್ನವರು ಭಕ್ತಿಯ ನಾನಾ ಮುಖಗಳಿಂದ ಆಚರಿಸುತ್ತಾ ತಮ್ಮ ದಾರಿಯನ್ನು ಕಂಡುಕೊಳ್ಳುವುದರೊಂದಿಗೆ ಸಮಾಜದಲ್ಲಿ ಒಂದು ಹಾದಿಯನ್ನು ಸಿದ್ಧಪಡಿಸಿದರು. ಸಂಸಾರದ ನಿಸ್ಸಾರತೆ ನಶ್ವರತೆಗಳನ್ನು ಎತ್ತಿತೋರಿಸುವುದು ತನ್ಮೂಲಕ ಲೌಕಿಕ ಭೋಗದಲ್ಲಿ ತೊಡಗಿ ಯಾವ ಯೋಗ್ಯತೆಯನ್ನಾದರೂ ಸಿದ್ಧವಾಗುವ ಮನಸ್ಸನ್ನು ಭಗವಂತನ ಕಡೆ ತಿರುಗಿಸುವುದು. ಹಾಗೆ ತಿರುಗಿಸಿ ಶಾಶ್ವತವಾದ ಸುಖದ ಕಡೆ ಜನಸಾಮಾನ್ಯವನ್ನು ಒಯ್ದು ಸ್ಥಾಪಿಸುವದು. ಇದು ಕೀರ್ತನ ಪ್ರಕಾರದ ಒಟ್ಟುಗುರಿ'' (೧೯೩೫:೨) ಹೀಗೆ ಸಾಹಿತ್ಯ ಮತ್ತು ಸಮಾಜದ ನಡುವೆ ಒಂದು ಬಗೆಯ ಸಂಬಂಧವನ್ನು ಏರ್ಪಡಿಸಿದ ಕೀರ್ತಿ ಇದಕ್ಕೆ ಸಲ್ಲುತ್ತದೆ. ಕೀರ್ತನೆಗಳು ದಾಸರ ಹಾಡುಗಳೆಂದೂ ಪ್ರಸಿದ್ಧವಾಗಿ ನೀತಿತತ್ವವನ್ನು ಬೋಧಿಸಿ ಬದುಕನ್ನು ನೈತಿಕ ಪರಿಪೂರ್ಣತೆಯತ್ತ ಸಾಗಿಸುವ ವಾಹಕಗಳಾಗಿವೆ. ಸುಮಾರು ೧೩-೧೪ನೆಯ ಶತಮಾನದಲ್ಲಿ ಜೀವಿಸಿದ್ದ ನರಹರಿತೀರ್ಥರುಕೀರ್ತನ ಪರಂಪರೆಯ ಆದ್ಯಕೃತಿಕಾರರು. ಇವರು ಬರೆದ ಮೂರು ಹಾಡುಗಳು ಉಪಲಬ್ಧವಿವೆ. ಮುಂದೆ ಪುರಂದರದಾಸರು. ಕನಕದಾಸರು. ಜಗನ್ನಾಥದಾಸರು. ಶ್ರೀ ಪಾದರಾಯರು. ಪ್ರಸನ್ನ ವೆಂಕಟದಾಸರು. ಅನೇಕರು ಕೀರ್ತನ ಅಥವಾ ದಾಸ ಪರಂಪರೆಯ ಹಾಡುಗಳಲ್ಲಿ ಅಪೂರ್ವ ಸಾಹಿತ್ಯ ನಿರ್ಮಾಣ ಮಾಡಿದರು. ಏಕ ಬಗೆಯ ರೂಪದಲ್ಲಿ ಸಾಮಾಜಿಕ ಸ್ವರೂಪ. ಸಮಸ್ಯೆ. ಸಂಬಂಧ ಬದುಕು ಮುಂತಾದ ವಿಷಯಗಳು ಅಡಕವಾದವು.

ದಾಸರ ಹಾಡುಗಳು ತುಂಬ ಸರಳವಾದ ಆಡು ನುಡಿಯ ಭಾಷಾ ಸ್ವರೂಪವನ್ನು ಹೊಂದಿವೆ. ಬಹುಶಃ ಇದಕ್ಕೆ ಹಿಂದಿನ ವಚನಕಾರರ ಪರಂಪರಯೇ ಪ್ರೇರಣೆಯಾಗಿದೆ. ಮುಂದೆ ದಾಸರೆ ಶುದ್ಧ ವೈದಿಕರಾಗಿದ್ದರಿಂದ ಅವರ ಹಾಡುಗಳಿಗೆಮತ್ತಷ್ಟು ಸತ್ವ ಹಾಗೂ ಅಧಿಕೃತತೆ ಲಭಿಸಿದ್ದು ಬಹುಮುಖ್ಯ ಸಂಗತಿ. ಕ್ರಿಶ ೧೫೫೦ ರಲ್ಲಿ ಹರಿದಾಸರಿಂದ ರಚಿತವಾದದಾಸರ ಪದಗಳು ಪ್ರತಿ ಒಟ್ಟು ದಾಸ ಪ್ರಕಾರದ ಸ್ವರೂಪವನ್ನು ಪ್ರತಿನಿಧಿಸುತ್ತದೆ.

ಆದಿ : ದಾಸರ ಪದಗಳು ರಾಗಮುಖಾರಿ ಝಂಪೆ ತಾಳಾ
ಆರು ಹಿತವರು ನಿನಗೆ ಮೂರು ಮಂದಿಗಳೊಳಗೆ
ನಾರಿಯೋ ಧಾರಣಿಯೋ ಬಲಧನದ ಸಿರಿಯೊ

ಅಂತ್ಯ : ಸ್ವಾಮಿ ಪುಷ್ಕರಣಿಯ ವಾಸನಿಗೆ
ಭೂಮಿ ವರಾಹ ತಿಮ್ಮಪ್ಪನಿಗೆ
ಪ್ರೇಮದಿ ಜಗವನು ಸಲಹುವ ನಾಮದ
ಸೋಮ ಸನ್ನಿಭನಾದ ವೆಂಕಟಗೆ

ಇದು ೧೮೫೦ರಲ್ಲಿ ಮಂಗಳೂರಿನಲ್ಲಿ ಛಾಪಿಸಿದ್ದ ಕಲ್ಲಚ್ಚು ಪ್ರತಿ. ಇದನ್ನು ವರದರಾಜರಾಯರು `ಗ್ಯಾರೆಟ್ ಪ್ರತಿ' ಎಂದು ಕರೆದಿದ್ದಾರೆ. ಈಗ ಉಪಲಬ್ಧವಾಗಿರುವ ದಾಸಸಾಹಿತ್ಯದ ಹಸ್ತಪ್ರತಿಗಳು ಮೂರು ಬಗೆಯಾಗಿವೆ. ೧ ಓಲೆ ಪ್ರತಿಗಳು ೨. ದಪ್ಪ ಕೈಕಾಗದದ ಪ್ರತಿಗಳು ೩. ಸಾಮಾನ್ಯ ಕಾಗದದ ಹಸ್ತಪ್ರತಿಗಳುಇವುಗಳಲ್ಲಿ ಓಲೆಯ ಪ್ರತಿಗಳು ಕನ್ನಡ ಲಿಪಿಯಲ್ಲಿಯೂ ಕಾಗದದ ಪ್ರತಿಗಳು ದೇವನಾಗರೀ, ತೆಲುಗು ಮತ್ತು ಕನ್ನಡಲಿಪಿಯಲ್ಲಿಯೂ ಇವೆ. ಈ ಎಲ್ಲ ಹಸ್ತಪ್ರತಿಗಳಿಗೆ ಕೃಷ್ಣಾಜಿನದ ಕಟ್ಟುಹಾಕಿ ಸಂರಕ್ಷಿಸುವದು ಗಮನಾರ್ಹವಾಗಿದೆ. ಈಗ ಸಿಕ್ಕಿರುವ ಹರಿದಾಸ ಸಾಹಿತ್ಯದ

ಹಸ್ತಪ್ರತಿಗಳಲ್ಲಿ ಮೈಸೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನಸಂಸ್ಥೆಯಲ್ಲಿರುವ ಪ್ರತಿ ಕೇವಲ ೧೬೭ ವರ್ಷಗಳಷ್ಟು ಹಿಂದಿನದು. ವೈದಿಕ ಹಸ್ತಪ್ರತಿಗಳ ಸ್ವರೂಪವನ್ನು ಗುರುತಿಸಿ ಹೇಳುವುದಾದರೆ ಯಾವ ಒಂದು ಪ್ರತಿಯನ್ನು ಸುಮಾರು ೨೦೦ ವರ್ಷಗಳಿಗಿಂತ ಹಿಂದಿನದೆಂದು ಗುರುತಿಸುವದು ಕಷ್ಟ. ಈ ಪರಿಸ್ಥಿತಿಯಿಂದಾಗಿ ಅವುಗಳಲ್ಲಿ ಸ್ಖಾಲಿತ್ಯಗಳು ಹೆಚ್ಚಾಗಿವೆ.

ಇದು ಒಟ್ಟು ವೈದಿಕ ಹಸ್ತಪ್ರತಿಗಳ ಅವಲೋಕನ. ಭಕ್ತಿ,ಭಗವಂತ,ಲೌಕಿಕ, ಧರ್ಮ, ಸಮಾಜ ಸಾಮಾಜಿಕಪರವಾದ ನೀತಿ ಮುಂತಾದ ವಿಷಯಗಳಲ್ಲಿ ಅಭಿವ್ಯಕ್ತಗೊಂಡವು. ಬಹುವಾಗಿ ಧರ್ಮ,ತತ್ವ ನೀತಿ, ಲೋಕ ಜೀವನದ ವಿಮರ್ಶೆ ಇವುಗಳನ್ನು ಜನರಲ್ಲಿ ಪ್ರಚಾರಮಾಡಿ ಅವರಿಗೆ ಭಕ್ತಿಯನ್ನು, ವೈರಾಗ್ಯವನ್ನು ಜೀವನದ ಸ್ವರೂಪವನ್ನು ತಿಳಿಸುವದು ದಾಸರ ಉದ್ದೇಶವಾಗಿತ್ತು. ಆದರೆ ಇಂಥದೊಂದು ಭಕ್ತಿ ಮಾರ್ಗ ಒಂದು ಜನತೆಯಾಗಿ ಎಷ್ಟು ಉಪಕಾರ ಮಾಡಿತೆಂಬುದನ್ನು ಅವಲೋಕಿಸಬೇಕಾಗಿದೆ.

**ಅಡಿಟಿಪ್ಪಣಿಗಳು:**

೧. ಕೆ. ೧೮೧:೭: ಸಂ:ಎಚ್ ದೇವೀರಪ್ಪ:೧೯೬೨: ಮೈಸೂರು ಪ್ರಾಚ್ಯವಿದ್ಯಾ ಸಂಶೋಧನಾಲಯದ ಕನ್ನಡ ಹಸ್ತಪ್ರತಿ ಸೂಚಿ ಸಂ:೩ ಪು ೯೭

೨. ಕರ್ನಾಟಕ ಕವಿ ಚರಿತೆ ಸಂ:೩ ೬೧

೩. ಕೆ.ಎ.೭೦. ಸಂ:ಎಚ್ ದೇವೀರಪ್ಪ: ೧೯೬೨ ಸಂ:೩ ೧೭೮

೪. ಕೆ. ೪೪೩:೧ ಸಂ.ಎಚ್ ದೇವೀರಪ್ಪ: ೧೯೬೨ಸಂ:೩ ೧೨೭

೫ ಕೆ ೫೪೮ ಅದೇ ಸಂ:೩ ೧೩೭

೬. ಕೆ ಎ ೨೬೫ ಅದೇ ಸಂ:೩ ೬೨

೭. ಕೆ.ಎ ೧೯೦:೭ ಅದೇ ಸಂ:೪ ೭೧

೮. ಕೆ.ಎ ೮೭:೨ ಅದೇ ಸಂ:೪ ೫೧೦

೯ ಕೆ.ಎ ೨೭ ಅದೇ ಸಂ:೨ ೧೬೫

## ಅಧ್ಯಾಯ ಮೂರು

## ಹಸ್ತಪ್ರತಿಗಳ ಅಂತರ್ ನೆಲೆಗಳು

ಹಿಂದಿನ ಅಧ್ಯಾಯಗಳಲ್ಲಿ ಹಸ್ತಪ್ರತಿಗಳ ರೂಪ ಹಾಗೂ ವಿಷಯ ವೈವಿಧ್ಯಗಳನ್ನು ಕುರಿತು ಸ್ಥೂಲವಾಗಿ ಚರ್ಚಿಸಲಾಗಿದೆ. ಈ ಅಧ್ಯಾಯದಲ್ಲಿ ಹಸ್ತಪ್ರತಿಗಳನ್ನು ಅಂತರ್ ಶಿಸ್ತೀಯ ಅಧ್ಯಯನಕ್ಕೆ ಒಳಪಡಿಸಿ ನೋಡುವ ಪ್ರಯತ್ನಮಾಡಲಾಗಿದೆ.ಅಂದರೆ ಒಂದು ಹಸ್ತಪ್ರತಿ ಕೇವಲ ಒಂದು ವಿಷಯವನ್ನಲ್ಲದೆ ಅದು ತನ್ನ ಒಡಲೊಳಗೆ ಸಮಕಾಲೀನವೆನ್ನಬಹುದಾದ ಹಲವಾರು ವಿಷಯಗಳನ್ನು ಒಳಗೊಂಡಿರುತ್ತದೆ. ಹೀಗಾಗಿ ಅವು ಬರೀ ಸಾಹಿತ್ಯಿಕವಾಗಿ ಮಾತ್ರವಲ್ಲ ಧಾರ್ಮಿಕ ,ಸಾಮಾಜಿಕ ,ರಾಜಕೀಯ ಐತಿಹಾಸಿಕವಾದ ಸಾಂಸ್ಕೃತಿಕ ಅನನ್ಯತೆಯನ್ನು ಅನಾವರಣಗೊಳಿಸುವುದರಿಂದ ಅವುಗಳನ್ನು ಅಂತರ್ ಶಿಸ್ತೀಯ ಅಧ್ಯಯನಕ್ಕೆ ಒಳಪಡಿಸುವ ತಾತ್ವಿಕ ಸಿದ್ಧಾಂತಗಳು ಕನ್ನಡ ಹಸ್ತಪ್ರತಿ ಲೋಕದಲ್ಲಿ ಇನ್ನೂ ವ್ಯಾಪಕವಾಗಿ ಸಿದ್ಧವಾಗಬೇಕಿದೆ. ಪ್ರಸ್ತುತ ಪ್ರಬಂಧದಲ್ಲಿ ಈ ಪ್ರಯತ್ನ ಆರಂಭ ಮಾತ್ರ. ಇಲ್ಲಿ ಎರಡು ನೆಲೆಗಳಲ್ಲಿ ಅಧ್ಯಯನಗಳನ್ನು ವಿಭಾಗಿಸಿಕೊಳ್ಳಲಾಗಿದೆ.

**ಒಂದು : ಏಕನೆಲೆಯ ಹಸ್ತಪ್ರತಿಗಳು**

ಇಲ್ಲಿ ಹಸ್ತಪ್ರತಿಗಳು ಖಚಿತವಾಗಿ ಒಂದು ಸಂಗತಿಯನ್ನು ಮಾತ್ರ ತಿಳಿಸುವಂತಹವು . ಆದಾಗ್ಯೂ ಸಂದರ್ಭಕ್ಕೆ ತಕ್ಕಂತೆ ಅವುಗಳಲ್ಲಿ ಬೇರೆ ಸ್ವರೂಪದ ಸಂಗತಿಗಳು ಜೊತೆಯಾಗಿರುವ ಸಾಧ್ಯತೆಗಳಿವೆ. ಒಂದು ಧಾರ್ಮಿಕ ಹಸ್ತಪ್ರತಿ ಎಂದಾಕ್ಷಣ ಅದರಲ್ಲಿ ಸಮಾಜ ಸಂಸ್ಕೃತಿಗಳ ಚರ್ಚೆ ಬಂದೇ ಬರುತ್ತದೆ. ಆದ್ದರಿಂದ ಈ ಹಸ್ತಪ್ರತಿ ಖಚಿತವಾಗಿ ಈ ವಿಷಯವನ್ನು ನಿರೂಪಿಸುವ ಆಕರವಾಗಿದೆ ಎಂದು ಹೇಳುವದು ಕೂಡಾ ಒಮ್ಮೊಮ್ಮೆ ಸಾಧ್ಯವಾಗಲಿಕ್ಕಿಲ್ಲ.

**ಎರಡು: ಅನ್ಯಾಂಶಗಳನ್ನೊಳಗೊಂಡ ಹಸ್ತಪ್ರತಿಗಳು**

ಇದು ಸ್ಪಷ್ಟವಾಗಿ ಒಂದು ವಿಷಯದೊಡನೆ ಇನ್ನೊಂದು ವಿಷಯ ಸೇರಿಕೊಂಡಿರುವ ಮಾದರಿ. ಇಲ್ಲಿ ಯಾವುದು ಕೂಡಾ ಅಂತಿಮವಲ್ಲ . ಇಲ್ಲಿ ಒಂದು ಸಂಗತಿಯನ್ನು ಇನ್ನೊಂದು ಸಂಗತಿ ಬೆಂಬಲಿಸುವುದರಿಂದ ಅಂತಹ ಹಸ್ತಪ್ರತಿಗಳಿಗೆ ಮಹತ್ವವಿದೆ.

೧. ಏಕನೆಲೆಯ ಹಸ್ತಪ್ರತಿಗಳು.

ಅ)ಶುದ್ಧ ಧಾರ್ಮಿಕ ಹಸ್ತ ಪ್ರತಿಗಳು:

ಪ್ರಾಚೀನ ಕರ್ನಾಟಕದ ಪಂಪ ಜನ್ನರ ಧಾರ್ಮಿಕ ಸಂದರ್ಭಕ್ಕೂ, ಮಧ್ಯಕಾಲೀನ ಕರ್ನಾಟಕದ ಹರಿಹರ,ರಾಘವಾಂಕ,ಚಾಮರಸ ಮತ್ತು ವೈದಿಕ ಧಾರ್ಮಿಕ ಸಂದರ್ಭಗಳಿಗೆಲ್ಲ ಹಲವಾರು ಬಗೆಯ ಪ್ರೇರಣೆಗಳುಂಟಾಗಿವೆ. ಈ ಪ್ರೇರಣೆ ಪ್ರಭಾವಗಳ ಹಿನ್ನೆಲೆಯಲ್ಲಿಯೇ ಆಯಾ ಧಾರ್ಮಿಕ ಹಸ್ತಪ್ರತಿಗಳು ನಿರ್ಮಾಣವಾಗಿವೆ. ಶುದ್ಧಧಾರ್ಮಿಕ ಸ್ವರೂಪದಲ್ಲಿ ಆಯಾ ಧರ್ಮದ ಭಕ್ತಿ,ಮತ,ತತ್ವ,ಸಿದ್ಧಾಂತಗಳನ್ನು ವಿವರಿಸುವ ಹಸ್ತಪ್ರತಿಗಳು ಒಳಗೊಳ್ಳುತ್ತವೆ.

ಜೈನರಲ್ಲಿ ೨೪ ತೀರ್ಥಂಕರರ ಚರಿತೆಗಳು,ತ್ರಿಷಷ್ಠಿ ಶಲಾಕ ಪುರುಷರ ಚರಿತೆ,ತೀರ್ಥಂಕರರನ್ನು ಕುರಿತ ಪುರಾಣಗಳು ಮುಂತಾದವು ಧಾರ್ಮಿಕ ಸ್ವರೂಪವನ್ನು ವಿವರಿಸುವ ವಿಷಯಗಳಾಗುತ್ತವೆ. ಪಂಪ,ರನ್ನ,ಜನ್ನರ,ಮಾದರಿಯಲ್ಲೆ ಅನೇಕ ಜೈನಕವಿಗಳು ಧಾರ್ಮಿಕ ಹಸ್ತ ಪ್ರತಿಗಳನ್ನು ರಚಿಸಿದ್ದಾರೆ.ಕಿ.ಶ್ರ.೧೧೮೯ರಲ್ಲಿ ಅಗ್ಗಳ ಕವಿಯಿಂದ ಚಂಪುರೂಪದಲ್ಲಿ ನಿರ್ಮಾಣವಾದಚಂದ್ರಪ್ರಭ ಪುರಾಣ[೧] 8ನೆಯ ತೀರ್ಥಂಕರನಾದ ಚಂದ್ರಪ್ರಭನ ಚರಿತ್ರೆಯನ್ನು ಹೇಳುವುದರ ಮೂಲಕ ಜೈನ ಧರ್ಮವನ್ನು ಹೇಳಲು ಪಂಪನ ಮಾದರಿಯಲ್ಲಿ ಹುಟ್ಟಿಕೊಂಡ ಹಸ್ತಪ್ರತಿಯಾಗಿದೆ. ಸಾಂಗತ್ಯರೂಪದಲ್ಲಿ ನಿರ್ಮಾಣವಾದ ನೇಮೀವೃತಿಯೆಜಿನವಚನಾಮೃತ ಶರಧಿ[೨] ಜೈನ ಧರ್ಮದ ಸಿದ್ಧಾಂತವನ್ನು ವರ್ಣಿಸುತ್ತದೆ.' ಯಶೋಧರ ಮತ್ತು ಅಮೃತಮತಿಯಂತಹ ಲೌಕಿಕ ಪಾತ್ರಗಳ ಮೂಲಕ ಧಾರ್ಮಿಕತೆಯನ್ನು ವರ್ಣಿಸುವ ಜನ್ನನ ಮಾದರಿಯಲ್ಲಿ ಹಸ್ತಪ್ರತಿಗಳು ಹುಟ್ಟಿಕೊಂಡಿವೆ. ಕ್ರಿ.ಶ ೧೬೦೦ರಲ್ಲಿ ಭಾಮಿನಿ ಷಟ್ಪದಿಯಲ್ಲಿ ಪದ್ಮನಾಭ ಕವಿಯಿಂದ ರಚಿತವಾದ ಯಶೋಧರ ಚರಿತೆ[೩] ಮತ್ತು ಅದೇ ರೂಪದಲ್ಲಿ ಚಂದ್ರಸಾಗರವರ್ಣಿಯಿಂದ ನಿರ್ಮಾಣವಾದ 'ಯಶೋಧರ ಷಟ್ಪದಿ'ಗಳು[೪] ಜೈನಧರ್ಮದ ಪ್ರಚಾರಕ್ಕಾಗಿಯೇ ಹುಟ್ಟಿಕೊಂಡ ಹಸ್ತಪ್ರತಿಗಳಾಗಿವೆ. ವೀರಶೈವರಲ್ಲಿ ಶಿವನ ಲೀಲೆಗಳು,೬೩ ಪುರಾತನರ ಚರಿತ್ರೆಗಳು ಪಂಚಾಚಾರ್ಯರ ಚರಿತ್ರೆಗಳು, ಶಿವಭಕ್ತರ ಕಥೆ ಹಾಗೂ ವೀರಶೈವ ತತ್ವವನ್ನು ಮುಖ್ಯವಾಗಿಟ್ಟುಕೊಂಡು ಹುಟ್ಟಿದ ಹಸ್ತಪ್ರತಿಗಳು ಧಾರ್ಮಿಕ ಸ್ವರೂಪದವುಗಳಾಗಿವೆ. ಕ್ರಿ.ಶ.೧೧೬೦ರಲ್ಲಿ ತ್ರಿಪದಿಯಲ್ಲಿ ರಚಿತವಾದ ಚನ್ನಮಲ್ಲ ಕವಿಯ "ಆತ್ಮಲಿಂಗ ಪ್ರಣವ ಸಂಯೋಗ ಸ್ಥಲದ ತ್ರಿವಿಧಿ"[೫] ಹಾಗೂ ಕ್ರಿ.ಶ ೧೬೫೦ರಲ್ಲಿ ಸಾಂಗತ್ಯ ರೂಪದಲ್ಲಿ ನಿರ್ಮಾಣವಾದ ಶಾಂತಮಲ್ಲನ 'ಅನುಭವಮುಕ್ತಿ' [೬]ಇವು ಪೂರ್ಣವಾಗಿ ವೀರಶೈವ ಧರ್ಮ ಕುರಿತಾದ ವಿವರಣೆ ನೀಡುತ್ತವೆ. ಷಟ್ಸ್ಥಲ ಸಿದ್ಧಾಂತದ ಮೂಲಕ ಗುಬ್ಬಿಯ ಮಲ್ಲಣಾರ್ಯನ (ಕ್ರಿ.ಶ೧೫೩೦)'ಗಣಭಾಷ್ಯ ರತ್ನಮಾಲೆ'[೭]ಯು, ಶಿವಶರಣರ ಕಥೆಯ ಮೂಲಕ ಅದೃಶ್ಯ ಕವಿಯ (ಕ್ರಿ.ಶ.೧೫೮೦)'ಪ್ರೌಢರಾಯನ ಕಾವ್ಯ'[೮]ದಂತಹ ಹಸ್ತಪ್ರತಿಗಳು ವೀರಶೈವ ಧರ್ಮದ ವಿವರವನ್ನು ತಿಳಿಸುತ್ತವೆ. ಸಿದ್ಧಾಂತ ರೂಪದಲ್ಲಿ ತಾತ್ವಿಕವಾಗಿ ಧರ್ಮವನ್ನು ಉಪದೇಶಿಸುವ ಹಸ್ತಪ್ರತಿಗಳಲ್ಲಿ ಜಗುನೆ ಮರುಳದೇವರ(ಕ್ರಿ.ಶ.೧೫೮೦) ಕವಿಯ 'ಮರುಳದೇವರ ಕಂದ'[೯] ಹಾಗೂ ಹುಬ್ಬಳ್ಳಿಯ ಸಂಗಯ್ಯನ 'ಶಿವಯೋಗ ರತ್ನಾಕರ' [೧೦] ಹಸ್ತಪ್ರತಿಗಳು ಮಹತ್ವದ ದಾಖಲೆಗಳಾಗುತ್ತವೆ.

ವೈದಿಕ ಹಸ್ತಪ್ರತಿಗಳು ವಿಷ್ಣು ಹಾಗೂ ಕೃಷ್ಣನ ಪಾರಮ್ಯವನ್ನು ಹೇಳುವುದರ ಮೂಲಕ ಧಾರ್ಮಿಕ ವಿಷಯವನ್ನು ಅನಾವರಣಗೊಳಿಸುತ್ತವೆ. ಇದರಿಂದ ಈ ಧಾರ್ಮಿಕ ಹಸ್ತಪ್ರತಿಗಳಿಗೆ ವಿಷಯವಸ್ತು ನೇರವಾಗಿ ಭಗವದ್ಗೀತೆಯಿಂದಲೇ ದೊರೆಯಿತು. ಭಾಗವತ,ವಿಷ್ಣುಪುರಾಣ,ಹರಿಲೀಲೆಗಳಲ್ಲದೆ ವೈದಿಕ ಸಿದ್ಧಾಂತವನ್ನು ಹೇಳುವ ಸಾಮಗ್ರಿಗಳು ಈ ವ್ಯಾಪ್ತಿಗೆ ಒಳಪಡುತ್ತವೆ. ಚಾಟುವಿಠಲನಾಥನ(ಕ್ರಿ.ಶ.೧೫೩೦) 'ಭಾಗವತ'[೧೧]ಚಿಕ್ಕದೇವರಾಜನ(ಕ್ರಿ.ಶ.೧೬೮೦) 'ಭಾಗವತಟೀಕು' [೧೨] ನಾರಾಯಣ ಕವಿಯ (ಕ್ರಿ.ಶ.೧೪೫೦) 'ಭಾಗವತ' [೧೩] ಮತ್ತು ನಾಗರಸ ಕವಿಯ (ಕ್ರಿ.ಶ.೧೬೫೦) 'ಭಗವದ್ಗೀತೆ' [೧೪] ಮುಂತಾದ ಹಸ್ತಪ್ರತಿಗಳು ಭಾಗವತದ ಮೂಲಕವೈದಿಕ ಧರ್ಮದ ಸಿದ್ಧಾಂತವನ್ನು ಕಟ್ಟಿಕೊಡುತ್ತವೆ. ಹಾಗೆಯೇ

ಚಿಕ್ಕುಪಾಧ್ಯಾಯನ(ಕ್ರಿ.ಶ.೧೬೭೨)‘ವಿಷ್ಣುಪುರಾಣ’[೧೫], ಕನಕದಾಸರ(ಕ್ರಿ.ಶ.೧೫೫೦)‘ವಿಷ್ಣುಭಕ್ತಿಸಾರ’[೧೬] ಜಗನ್ನಾಥ ವಿಠಲನ(ಕ್ರಿ.ಶ.೧೭೭೫)‘ಹರಿಕಥಾಮೃತಸಾರ’[೧೭]ಮತ್ತು ಶ್ರೀನಿವಾಸ ಕವಿಯ(ಕ್ರಿ.ಶ.೧೮೮೧)‘ಹರಿಲೀಲಾ ವಿಲಾಸ’[೧೮] ಮುಂತಾದವು ಹರಿ ಅಥವಾ ವಿಷ್ಣುವಿನ ಮಹಿಮೆಯನ್ನು ಸಾರುವುದರ ಮೂಲಕ ವೈದಿಕ ಧರ್ಮದ ಮಹತ್ವವನ್ನ ವರ್ಣಿಸುವ ಹಸ್ತಪ್ರತಿಗಳಾಗಿವೆ.

### ಬ)ಶುದ್ಧ ಲೌಕಿಕ ಹಸ್ತಪ್ರತಿಗಳು:

ಕನ್ನಡದ ಕವಿಗಳು ಧಾರ್ಮಿಕ ವಿಷಯ ವಸ್ತುವಿನ ಜೊತೆಗೆ ಲೌಕಿಕ ವಸ್ತುವಿನಲ್ಲಿ ಶುದ್ಧಕಾವ್ಯಗಳನ್ನು ರಚಿಸಿದ್ದಾರೆ. ಧಾರ್ಮಿಕತೆಗಿಂತ ಲೌಕಿಕದಲ್ಲೆ ಅವರ ಸೃಜನಶೀಲ ಶಕ್ತಿ ಪ್ರತಿಭೆ ಪಾಂಡಿತ್ಯ ಕಾವ್ಯಶಕ್ತಿಗಳು ಸಮರ್ಥವಾಗಿ ಅಭಿವ್ಯಕ್ತಿಗೊಂಡಿವೆ. ಧಾರ್ಮಿಕ ಕೃತಿಗಳನ್ನು ಧರ್ಮಕ್ಕಾಗಿ ಸೃಷ್ಟಿಸಿದ್ದರಿಂದ ಅಲ್ಲಿ ಕೇವಲ ಧರ್ಮವೆ ಮೇಲುಗೈ ಸಾಧಿಸಿತು. ಲೌಕಿಕ ಸಂದರ್ಭದಲ್ಲಿ ರಾಜನ ಆಶ್ರಯದೊಳಗೆ ಕಾವ್ಯ ಬರೆಯುವ ಅಗತ್ಯವಿದ್ದುದರಿಂದ ಅಲ್ಲಿ ಮಹಾಸಾಮ್ರಾಜ್ಯದ ಜೊತೆಗೆ ಸಾಮಾಜಿಕ ಸಂಘಟನೆಯ ಎಲ್ಲ ಬದುಕುಗಳು ಅಭಿವ್ಯಕ್ತಗೊಳ್ಳುವದಕ್ಕೆ ಸಾಧ್ಯವಾಯಿತು.ಸಮಕಾಲೀನ ಸಮಾಜವನ್ನು ತಿಳಿಯುವಲ್ಲಿ ಧಾರ್ಮಿಕ ಹಸ್ತಪ್ರತಿಗಳಿಗಿಂತ ಲೌಕಿಕ ಹಸ್ತಪ್ರತಿಗಳೇ ಅತ್ಯಂತ ಸೃಜನಶೀಲವಾದ ಆಕರಗಳಾಗುತ್ತವೆ. ರಾಮಾಯಣ, ಮಹಾಭಾರತದ ವಸ್ತುವನ್ನಾಯ್ದುಕೊಳ್ಳವುದರ ಮೂಲಕ ಜೈನ ಕವಿಗಳು ಶುದ್ಧ ಲೌಕಿಕ ಕಾವ್ಯಗಳನ್ನು ಬರೆದರು. ಪಂಪನ ವಿಕ್ರಮಾರ್ಜುನ ವಿಜಯ, ರನ್ನನ ಸಾಹಸಭೀಮ ವಿಜಯ, ಪೊನ್ನನ ಭುವನೈಕ್ಯ ರಾಮಾಭ್ಯುದಯ ಈ ಮಾದರಿಯವು. ಇವುಗಳ ಹಿನ್ನೆಲೆಯಲ್ಲಿ ಅನೇಕ ಕವಿಗಳು ಶುದ್ಧ ಲೌಕಿಕವೆನ್ನಬಹುದಾದ ಹಸ್ತಪ್ರತಿಗಳನ್ನು ರಚಿಸಿದ್ದಾರೆ. ಜೈನ ರಾಮಾಯಣ ಪರಂಪರೆಯಲ್ಲಿ ನಾಗಚಂದ್ರನ ರಾಮಚಂದ್ರ ಚರಿತಪುರಾಣ ಅಥವಾ ಪಂಪರಾಮಾಯಣ, ಕುಮದೇಂದುವಿನ ಕುಮದೇಂದು ರಾಮಾಯಣಗಳು ಮಹತ್ವವಾದವು. ಈ ಮಾದರಿಯಲ್ಲಿಯೇ ಕ್ರಿ.ಶ.೧೬ನೆಯ ಶತಮಾನದ ಮಿತ್ರದೇವಪ್ಪನ ‘ರಾಮನವಿಜಯ ಕಾವ್ಯ’’[೧೯] ಕೂಡಾ ಮಹತ್ವದ್ದಾಗುತ್ತದೆ. ಕ್ರಿ.ಶ ೧೫೩೮ ರಲ್ಲಿ ಸಾಂಗತ್ಯ ರೂಪದಲ್ಲಿ ನಿರ್ಮಾಣವಾದ ಬೊಂಬೆಯಲಕ್ಕ ಕವಿಯ ‘ಹರಿಶ್ಚಂದ್ರ ಸಾಂಗತ್ಯ’[೨೦] ಮತ್ತು ಹಲಗ ಕವಿಯ ‘ಹರಿಶ್ಚಂದ್ರ ಕಥೆ’[೨೧] ಗಳು ಶುದ್ಧ ಲೌಕಿಕ ಹಸ್ತಪ್ರತಿಗಳಾಗಿಗಮನ ಸೆಳೆಯುತ್ತವೆ.

### ಕ). ಶುದ್ಧ ಚಾರಿತ್ರಿಕ ಹಸ್ತಪ್ರತಿಗಳು:

“ಚರಿತ್ರೆ ಬರೆಯುಲು ಅತ್ಯವಶ್ಯವಾದ ಆಧಾರ ಸಾಮಗ್ರಿ ನಮ್ಮಲ್ಲಿ ಕಡಿಮೆ. ಈ ಕಡಿಮೆ ಆಧಾರ ಸಾಮಗ್ರಿಯಲ್ಲಿ ಪ್ರಾಮಾಣಿಕತೆ ಇನ್ನೂ ಕಡಿಮೆ” ಎಂಬ ಡಾ.ಎಂ.ಎಂ. ಕಲಬುರ್ಗಿಯವರ ‘ಮಾತುಗಳ ಹಿನ್ನೆಲೆಯ ಪ್ರಜ್ಞೆಯಲ್ಲಿ ಶುದ್ಧ ಚಾರಿತ್ರಿಕ ಹಸ್ತಪ್ರತಿಗಳ ವಿವೇಚನೆ ಮಾಡಬೇಕಾಗಿದೆ. (೧೯೮೮ ಪುಟ ೪೦೩)ಶಾಸನಗಳು,ರಾಜ ಚರಿತ್ರೆಗಳು,,ಕೆಲವು ಸಾಹಿತ್ಯಗಳು ಒಂದು ನಾಡಿನ ಇತಿಹಾಸ ರಚನೆಗೆ ಸಾಧನಗಳಾಗಿರುವಂತೆ ಹಸ್ತಪ್ರತಿಗಳು ಕೂಡಾ ಆ ಬಗೆಗೆ ಮಾಹಿತಿಯನ್ನು ಒದಗಿಸುತ್ತವೆ.ಕರ್ನಾಟಕದಲ್ಲಿ ದೊರೆಯುವ ಹಸ್ತಪ್ರತಿಗಳನ್ನು ವರ್ಗೀಕರಿಸಿದರೆ ಚರಿತ್ರೆಯನ್ನೇ ಪ್ರಧಾನ ಉದ್ದೇಶವನ್ನಾಗಿ ನಿರ್ಮಾಣಗೊಂಡಿರುವ ಹಸ್ತಪ್ರತಿಗಳಿಂದ ಐತಿಹಾಸಿಕವಾದ ಅನೇಕ ವಿಷಯಗಳು ಪ್ರಕಟವಾಗುವ ಸಾಧ್ಯತೆಗಳಿವೆ. ಕನ್ನಡದ ಪ್ರಾರಂಭದ ಅವಸ್ಥೆಯಲ್ಲಿ ಚಾರಿತ್ರಿಕ ಹಸ್ತಪ್ರತಿಗಳು ತೀರ ವಿರಳವಾಗಿ ಪ್ರಕಟವಾದವು. ಆರಂಭ ಯುಗದ ಚಾರಿತ್ರಿಕ ಹಸ್ತಪ್ರತಿಗಳಲ್ಲಿ ಐತಿಹಾಸಿಕ ವ್ಯಕ್ತಿಗಳು ಪೌರಾಣಿಕ ಪುರುಷರೊಂದಿಗೆ ಸಮೀಕರಿಸಲ್ಪಟ್ಟವರಾಗಿದ್ದರು.‘ನರರನ್ನು ಹೊಗಳುವುದು ಪೊಲ್ಲುಮೆ” ಎಂಬ ಧೋರಣೆ ಪ್ರಬಲವಾಗಿದ್ದರಿಂದ ಶುದ್ಧ ಚಾರಿತ್ರಿಕ ಹಸ್ತಪ್ರತಿಗಳು ವಾಸ್ತವವಾಗಿ

ಧಾರ್ಮಿಕವೇ ಆಗಿದ್ದವು.ಇದರಿಂದ ಮೊಟ್ಟಮೊದಲ ಬಾರಿಗೆ ಚಾರಿತ್ರಿಕ ಕಾವ್ಯದ ಹಣೆಪಟ್ಟಿಯಲ್ಲಿ ಸಿಕ್ಕ ಕೃತಿಯೆಂದರೆ ೧೬ನೆಯ ಶತಮಾನದ ನಂಜುಂಡನ 'ರಾಮನಾಥ ಚರಿತೆಯೆ. ಈ ಕಾವ್ಯದ ತರುವಾಯ ಐತಿಹಾಸಿಕ ಅಂಶಗಳ ಮೇಲೆ 'ತೋಂಟದ ರಾಯನ ಸಾಂಗತ್ಯ' ವೆಂಬ ಮತ್ತೊಂದು ಚಾರಿತ್ರಿಕ ಕಾವ್ಯ ರಚನೆಯಾಗಿದೆ. ರಾಮನಾಥ ಚರಿತೆ ಮತ್ತು ತೋಂಟದ ರಾಯನ ಸಾಂಗತ್ಯಗಳೆರಡೂ ಸಾಂಗತ್ಯ ರೂಪದಲ್ಲಿ ಪ್ರಕಟಗೊಂಡಿವೆ. ಇದರಿಂದ ಕನ್ನಡದಲ್ಲಿ ಚಾರಿತ್ರಿಕ ಹಸ್ತಪ್ರತಿಗಳು ಸಾಂಗತ್ಯ ರೂಪದಲ್ಲಿಯೇ ಪ್ರಾರಂಭವಾಗಿರಬಹುದೆಂದು ನಿರ್ಧರಿಸಲು ಅವಕಾಶವಿದೆ.
ಶುದ್ಧ ಚಾರಿತ್ರಿಕ ಕೃತಿಗಳ ನಿರ್ಮಾಣ ಬಹುತೇಕ ಮೈಸೂರು ಅರಸರ ಕಾಲದಲ್ಲಿಯೇ ನಡೆದಿದೆ. ಈಗ ಪ್ರಕಟವಾದ ಗೋವಿಂದ ವೈದ್ಯನ "ಕಂಠೀರವ ನರಸರಾಜ ವಿಜಯ"ದ ಬಳಿಕ ಐತಿಹಾಸಿಕ ಸಂಗತಿಗಳನ್ನೊಳಗೊಂಡ ಕಾವ್ಯಗಳು ಚಂಪು,ಗದ್ಯ ಪ್ರಕಾರಗಳಲ್ಲಿ ಎರಡೆರಡು ಕಾವ್ಯಗಳು, ಸಾಂಗತ್ಯದಲ್ಲಿ ಏಳೆಂಟು ಕಾವ್ಯಗಳು ರಚಿತವಾಗಿವೆ. ತಿರುಮಲಾರ್ಯನ 'ಚಿಕದೇವರಾಜ ವಿಜಯಂ' 'ಚಿಕ್ಕದೇವರಾಜ ವಂಶಾವಳಿ' ಹಾಗೂ 'ಅಪ್ರತಿಮವೀರಚರಿತೆ'ಗಳು ಮೈಸೂರಿನ ಇತಿಹಾಸ ರಚನೆಯಲ್ಲಿ ಗಣ್ಯ ಆಕರ ಗ್ರಂಥಗಳಾಗುತ್ತವೆ. ಕ್ರಿ.ಶ.೧೭೪೯ರಲ್ಲಿ ರಚಿತವಾದ ಲಿಂಗಣ್ಣ ಕವಿಯ 'ಕೆಳದಿ ನೃಪವಿಜಯ' ಕೆಳದಿ ಅರಸರ ವಂಶ ಪರಂಪರೆಯನ್ನು ಮತ್ತು ಆ ಕಾಲದ ಐತಿಹಾಸಿಕ ಘಟನೆಗಳನ್ನು ತಿಳಿಸುತ್ತದೆ. ಆ ನಂತರ ಹುಟ್ಟಿಕೊಂಡ ಪಾರ್ಶ್ವಕವಿಯ ನಿಂಬಸಾಮಂತಚರಿತೆ, ಮಲ್ಲಿಕಾರ್ಜುನ ಕವಿಯ (ಕ್ರಿ.ಶ.೧೫೪೮) ಇಮ್ಮಡಿ ಚಿಕ್ಕ ಭೂಪಾಲನ ಸಾಂಗತ್ಯ, ಸಿರುಮ ಚರಿತೆ, ಕುಮಾರರಾಮನ ಸಾಂಗತ್ಯಗಳೆಲ್ಲ ಚಾರಿತ್ರಿಕ ಧ್ವನಿಯನ್ನು ಅಭಿವ್ಯಕ್ತಿಸುವ ಕೃತಿಗಳಾಗಿವೆ.

ಶುದ್ಧ ಚಾರಿತ್ರಿಕ ಹಸ್ತಪ್ರತಿಗಳ ಸೃಜನಕ್ರಿಯೆಯಲ್ಲಿ ಜೈನ, ವೀರಶೈವ, ವೈದಿಕ ಕವಿಗಳೆಲ್ಲ ತಮ್ಮನ್ನು ತಾವು ತೊಡಗಿಸಿಕೊಂಡಿದ್ದಾರೆ. ಕ್ರಿ.ಶ. ೧೬೮೦ರ ಚಿಕ್ಕರಸ ಕವಿಯ 'ಸೊಣ್ಣಬೈರೇಗೌಡನ ಚರಿತ್ರೆ' ಈ ದೃಷ್ಟಿಯಿಂದ ಮುಖ್ಯವಾದದ್ದು.ಜೈನ ಕವಿಯಾದ ಚಿಕ್ಕರಸ ತನ್ನ ಆಶ್ರಯದಾತನಾದ ಸೊಣ್ಣ ಬೈರೇಗೌಡನನ್ನು ಕುರಿತು ಬರೆದ ಕಾವ್ಯವಿದು. ಇದರಲ್ಲಿ "ಆವತಿನಾಡ ಪ್ರಭುವಾದ ದೇವಣಾಪುರದ ಸೊಣ್ಣ ಬೈರೇಗೌಡನ ವಿಜಯಾದಿಗಳು ವರ್ಣಿತವಾಗಿವೆ " ಎಂದು ಆರ್ .ನರಸಿಂಹಾಚಾರ್ ಹೇಳುತ್ತಾರೆ. ಕ್ರಿ.ಶ. ೧೬೫೦ರಲ್ಲಿ ರಚಿತವಾದ 'ಇಮ್ಮಡಿ ತಮ್ಮರಾಯ ಕೆಂಪರಾಯ ಪದ"' ವೆಂಬ ಹಸ್ತಪ್ರತಿ ಇಮ್ಮಡಿ ಕೆಂಪೆಗೌಡನ ರಾಜಕೀಯಕ್ಕೆ ಸಂಬಂಧಿಸಿದ ವಿವರ ನೀಡುತ್ತದೆ. ಇದರ ಕವಿಯ ಬಗ್ಗೆ ತಿಳಿದಿಲ್ಲ. ಕ್ರಿ.ಶ. ೧೭೪೦ರಲ್ಲಿ ರಚಿತವಾದ ನೂರೊಂದಯ್ಯನ 'ಸೌಂದರ ಕಾವ್ಯ' ಕೃಷ್ಣರಾಜ ಮತ್ತವನ ದಳಪತಿಗಳಾದ ದೇವರಾಜ ನಂಜರಾಜರ ಈ ವಿಷಯವನ್ನು ತಿಳಿಸುವ ಹಸ್ತಪ್ರತಿಗಳಾಗಿವೆ. ಶ್ರೀನಿವಾಸನ (ಕ್ರಿ.ಶ.೧೮೩೦) ಕೃಷ್ಣರಾಜ ವರ್ಷವರ್ದಂತೀ ಶತಕ , ಮದ್ದಗಿರಿ ನಂಜಪ್ಪರ (ಕ್ರಿ.ಶ. ೧೮೪೦), ಕೃಷ್ಣರಾಜೇಂದ್ರ ವಿಲಾಸ, ದೇವಲಾಪುರದ ನಂಜುಂಡನ (ಕ್ರಿ.ಶ.೧೮೪೦) ಕೃಷ್ಣರಾಜ ಪಟ್ಟಾಭಿಷೇಕ ವರ್ಣನೆ , ಅಳಿಯ ಲಿಂಗರಾಜನ (ಕ್ರಿ.ಶ. ೧೮೨೩-೭೪), ನರಪತಿ ಚರಿತೆ ಮೊದಲಾದವು ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ಸಂಬಂಧಿಸಿದಂತೆ ರಚಿತವಾದ ಸಣ್ಣಪುಟ್ಟ ಹಸ್ತಪ್ರತಿಗಳಾಗಿವೆ. ಶುದ್ಧ ಚಾರಿತ್ರಿಕ ಹಸ್ತಪ್ರತಿಗಳಲ್ಲಿನ ಪಠ್ಯ ಭಾಗಗಳಲ್ಲಿ ದೊರೆಯುವ ಅಂಶಗಳು ಇತಿಹಾಸಕ್ಕೆ ಹೇಗೆ ನೇರವಾಗಿ ಆಕರವಾಗಬಲ್ಲವು ಎಂಬುದಕ್ಕೆ 'ವೇಣುಪುರದ ಕ್ಷತ್ರಿಯರ ವಂಶಾವಳಿ' ಹಸ್ತಪ್ರತಿಯನ್ನು ಗಮನಿಸಬಹುದು. ಅವರ ಪಾಠ ಸ್ವರೂಪ ಇಂತಿದೆ. "೨೫೮ ವರುಷ ೧೯ ದಿನ ಮೇಲ್ಕಂಡ ೧೨ ಜನ ಕಳಲೆ ಪಟ್ಟಣವನ್ನಾಳಿದವರು ನಂತರ ಹೈದರನು ಮೈಸೂರಿಗೆ ಕರೆಸಿಕೊಂಡನು. ಇವರಿಗೆ ಮಾಶಾಸನ ೪೦೦ ವರಹಾ ನಗದು ೩೦೦ ದಿನಸಿ ಹಸು ಕಾವಲು ತೋಟ ಗದ್ದೆ ಸರ್ವಮಾನ್ಯಗ್ರಾಮ ಸಹ ನಡೆಸುತ್ತ ಬಂದನು .ನಂತರ ಟಿಪ್ಪೂ ದಿವಸದಲ್ಲಿ ೨೦೦ ವರಹಾ ನಗದು ೩೦೦ ವರಹಾ ದಿನಸಿ ಹಸು ಗ್ರಾಮ ವಗೈರೆ ನಡೆಸುತ್ತ ಮೊಕೂಫ್ ಮಾಡಿದನು" ಎಂದು ಆಡಳಿತ ಸ್ವರೂಪದ ವಿವರಗಳನ್ನು ಈ ಹಸ್ತಪ್ರತಿ ಉಲ್ಲೇಖಿಸುತ್ತದೆ.

ಈ ಸ್ವರೂಪದಲ್ಲಿಯೇ ಅನೇಕ ಹಸ್ತಪ್ರತಿಗಳು ರೂಪಗೊಂಡಿವೆ. ಶ್ರೀರಂಗಪಟ್ಟಣ ಚರಿತ್ರೆ, ಹೊಳೆಹೊನ್ನೂರು ಕೈಫಿಯತ್ತು, ಹೊಯ್ಸಳರಾಜರ ಚರಿತ್ರೆ'[೩೬] ವೇಣುಗೋಪಾಲ ವರಪ್ರಸಾದ ಕವಿಯ (ಕ್ರಿ.ಶ.೧೬೮೦), 'ಚಿಕ್ಕದೇವರಾಜ ವಂಶಾವಳಿ'[೩೭], ಬಿಳಿಗಿಲ ಅರಸರ ಚರಿತೆ,[೩೮] ಮದಕರಿನಾಯಕನ ಚರಿತ್ರೆ[೩೯], ಬುಕ್ಕರಾಯನ ಚರಿತ್ರೆ[೪೦], ಧರಣಿ ಪಂಡಿತನ (ಕ್ರಿ.ಶ. ೧೬೫೦'ಬಿಜ್ಜಳರಾಯನ ಚರಿತ್ರೆ,[೪೧] ಶಾಂತಿ ನಿರಂಜನ ಕವಿಯ ಅಬ್ಬಲೂರು ಚರಿತೆ,[೪೨] ಕೆಳದಿ ಸಂಸ್ಥಾನದ ರಾಯರ ವಂಶಾವಳಿ,[೪೩] ಇತ್ಯಾದಿ ನೂರಾರು ಹಸ್ತಪ್ರತಿಗಳು ಚಾರಿತ್ರಿಕ ಧ್ವನಿಯುಳ್ಳ ವಸ್ತುವಾಗುತ್ತವೆ.

ಹೀಗೆ ಶುದ್ಧ ಚಾರಿತ್ರಿಕ ಹಸ್ತಪ್ರತಿಗಳಿಂದ ರಾಜವಂಶಾವಳಿ, ಆಡಳಿತಾತ್ಮಕ ಮಾದರಿಗಳು ಐತಿಹಾಸಿಕ ಘಟನೆ, ಆರ್ಥಿಕ, ಸಾಮಾಜಿಕ ಸಂಘಟನೆ, ರಾಜಕೀಯ ಸ್ವರೂಪದಂತ ಒಟ್ಟು ಸಾಂಸ್ಕೃತಿಕ ಮಹತ್ವವನ್ನು ಪುನರ್ ರೂಪಿಸಲು ಇಂಥ ಹಸ್ತಪ್ರತಿಗಳು ನೇರವಾದ ಮತ್ತು ಬಹುಮುಖ್ಯ ದಾಖಲೆಗಳಾಗುತ್ತವೆ.

### ಡ) ಶುದ್ಧ ಕಾಲ್ಪನಿಕ ಹಸ್ತಪ್ರತಿಗಳು

ಕಾಲ್ಪನಿಕವೆಂದರೆ ಇದ್ದ ವಾಸ್ತವಕ್ಕಿಂತ ದೂರವಾದದ್ದು, ರಮ್ಯವಾದದ್ದು. ಅನೇಕ ಸಾರಿ ಕೆಲವು ಸಂದರ್ಭಗಳಲ್ಲಿ ಪ್ರಸಿದ್ಧ ಕವಿಗಳ ಜೀವನ ಕಾರ್ಯಗಳಿಗೆ ಸಂಬಂಧಿಸಿದಂತೆ ಐತಿಹ್ಯಗಳು ಸೃಷ್ಟಿಯಾಗುತ್ತವೆ. ಇದರ ಪರಿಣಾಮವಾಗಿ ತಲೆಮಾರಿನಿಂದ ತಲೆಮಾರಿಗೆ ಕಟ್ಟುಕಥೆಗಳು ಹರಡಿಕೊಳ್ಳುತ್ತವೆ. ಹಿಂದಿನ ನೂರಾರು ವರ್ಷಗಳ ಕಥೆಯನ್ನು ಇವತ್ತು ವಾಸ್ತವವೆಂಬಂತೆ ಇಂಥ ಕಥೆಗಳು ನಂಬಿಸುತ್ತವೆ. ಇವು ಗ್ರಂಥಸ್ಥವಾದಾಗ ಚರಿತ್ರೆಯ ಸೋಗು ಹಾಕುವದೂ ಉಂಟು. ವಡ್ಡಾರಾಧನೆಯ ಕಥೆಗಳು ಹೀಗೆಯೇ ಕಾಲ್ಪನಿಕ ಮಾದರಿಯಲ್ಲಿ ಮುಂದುವರೆಯುತ್ತಾ ಯಾವುದಾವುದೋ ವಿಷಯಗಳನ್ನು ಚರಿತ್ರಿಸಲು ಪ್ರಯತ್ನ ಮಾಡುತ್ತವೆ. ದೇವಚಂದ್ರನ 'ರಾಜಾವಳಿಯ ಕಥೆ 'ಯ ಪ್ರಸಂಗಗಳು ಇದಕ್ಕೆ ಉತ್ತಮ ಉದಾಹರಣೆಗಳಾಗುತ್ತವೆ. ಕಾಲ್ಪನಿಕ ಕಥೆಗಳನ್ನು ಆಯ್ದುಕೊಂಡು ನಿರ್ಮಾಣವಾದ ಶುದ್ಧಕಾವ್ಯಗಳಲ್ಲಿ ನಾಗವರ್ಮನ 'ಕರ್ಣಾಟಕ ಕಾದಂಬರಿ', ಬಂಧುವರ್ಮನ ಕುಸುಮಾವಳಿ, ನೇಮಿಚಂದ್ರನ ಲೀಲಾವತಿ, ಆಂಡಯ್ಯನ ಕಬ್ಬಿಗರ ಕಾವ್ಯ ಮುಂತಾದವು ಪ್ರಮುಖ ಕೃತಿಗಳಾಗಿವೆ.ಹಸ್ತಪ್ರತಿ ಸಂದರ್ಭದಲ್ಲಿ ಈ ಕೆಳಗಿನ ಕೆಲಹಸ್ತಪ್ರತಿಗಳು ಕಾಲ್ಪನಿಕ ದೃಷ್ಟಿಯಿಂದ ಗಮನ ಸೆಳೆಯುತ್ತವೆ. ಕಾಲ್ಪನಿಕತೆಯಲ್ಲಿ ಜನಪ್ರಿಯವಾದ ಬೇತಾಳನ ಕಥೆಗಳನ್ನಾಧರಿಸಿದ ಕೆಲ ಹಸ್ತಪ್ರತಿಗಳು ಕನ್ನಡ ಸಂದರ್ಭದಲ್ಲಿ ಹುಟ್ಟಿಕೊಂಡಿವೆ. ಕ್ರಿ.ಶ.೧೭೫೦ರಲ್ಲಿ ಕಂದ ರೂಪದಲ್ಲಿ ರೂಪಗೊಂಡ ಚಂದ್ರಗುಪ್ತನ 'ಬೇತಾಳ ಪಂಚವಿಂಶತಿ ಕಥೆಗಳು'[೪೪] ಹಸ್ತಪ್ರತಿ ರಮ್ಯವಾದ ವಿಷಯಗಳನ್ನೊಳಗೊಂಡಿದೆ. ಅದರ ಸ್ವರೂಪ ಹೀಗಿದೆ.

ಅಂತ್ಯ : "ಮಾಯೋಪಾಯದಿಂದ ನಿಂನಂ ನಂಬಿ ಯಂನಂ
ತನಗೆ ಪಿಡಿತಂದು ಕೊಡು ಕಳುಹಿದ ನೀನದನಂನ
ರಿದು ಯೆಂದನಾ ವಿಕ್ರಮಂ ಮಹಾಬೆಂಗಾಶಾ
ಬೇತಾಳನಂ ಬೆಸಗೊಳಲಾ ಬೇತಾಳಂ ವಿಕ್ರಮನೊಡನೆ
ಯಿ ವೃತ್ತಾಂತಮಂ ಸವಿಸ್ತಾರಮಾಗಿ ಪೇಳುವೆ ಕೇಳಿಂದೆದನು
ಯಿ ಬೇತಾಳ ಪಂಚವಿಂಶತಿ ಕಥೆಯೊಳಗನ ಯಿಪ್ಪತ್ತೈದನೆ ಕಥೆ ಸಂಪೂರ್ಣ"

ಇಂಥದೆ ಕಥಾ ಸ್ವರೂಪವನ್ನಾಧರಿಸಿ ಇನ್ನೆರಡು ಹಸ್ತಪ್ರತಿಗಳು ರಚಿತವಾಗಿವೆ. ಕ್ರಿ.ಶ. ೧೭೨೫ರಲ್ಲಿ ಚಂಪು ರೂಪದಲ್ಲಿ ದೇವ ಕವಿಯಿಂದ ನಿರ್ಮಾಣವಾದ 'ಬತ್ತೀಸಪುತ್ತಳಿಕಥೆ'[೪೫] ಹಾಗೂ ಕ್ರಿ.ಶ.೧೮೦೦ರಲ್ಲಿ ಗದ್ಯದಲ್ಲಿ ರೂಪಗೊಂಡ ಮುಮ್ಮಡಿ ಕೃಷ್ಣರಾಜರ 'ಬತ್ತೀಸ ಪುತ್ತಳಿ ಕಥೆ'[೪೬] ಹಸ್ತಪ್ರತಿಗಳು ಮುಖ್ಯವಾದವು. ಚನ್ನಮಲ್ಲೇಶನ (ಕ್ರಿ.ಶ.೧೭೦೦) 'ದೀಪದ ಕಲಿಯರ ಕಾವ್ಯ'[೪೭] ದ ಹಸ್ತಪ್ರತಿಗೆ ದೀಪ ಹಚ್ಚುವ ಕಾಯಕದಿಂದ ಶಿವನನ್ನು ಮೆಚ್ಚಿಸಿದ ಕಲಿಯನ ಕಥೆ

ವಸ್ತುವಾಗಿದೆ. ಹಾಗೂ ಕ್ರಿ.ಶ.೧೨೦೦ರಲ್ಲಿ ದೇವಕವಿಯಿಂದ ಚಂಪು ರೂಪದಲ್ಲಿ ನಿರ್ಮಾಣವಾದ 'ಕುಸುಮಾವಳಿ'[೬೦] ಮದನಾವತಿಪುರದ ಮಣಿಕುಂಡಲ ರಾಜನ ಕಥೆಯನ್ನು ಕಾಲ್ಪನಿಕವಾಗಿ ವಿವರಿಸುವ ಹಸ್ತಪ್ರತಿಯಾಗಿದೆ. ವೀರಶೈವ ಸಂದರ್ಭದಲ್ಲಿ ಪವಾಡಗಳನ್ನು ಹೇಳುವುದರ ಮೂಲಕ ಕಾಲ್ಪನಿಕ ಹಸ್ತಪ್ರತಿಗಳು ನಿರ್ಮಾಣವಾಗಿವೆ. ಈ ಸಾಹಿತ್ಯದಲ್ಲಿ ಬಹುಸಂಖ್ಯೆಯ ಪವಾಡ ಕಥೆಗಳು ಬಸವಣ್ಣನವರ ಸುತ್ತ ಕುರಿತಾಗಿಯೂ ಇನ್ನೂ ಕೆಲವು ಚೆನ್ನಬಸವಣ್ಣ ಪುರಾತನರ ಹಾಗೂ ನೂತನ ಪುರಾತನರರನ್ನು ಕುರಿತಂಥವು. ಬಸವಣ್ಣನವರನ್ನು ಕುರಿತು ಅನಂತರ ಹುಟ್ಟಿಕೊಂಡ ಪವಾಡ ಕಥೆಗಳಿಗೆ ಭಕ್ತ ಜನತೆಯ ಶ್ರದ್ಧೆ ವಿಶ್ವಾಸಗಳೇ ಕಾರಣವಿರಬಹುದು. ಮರುಳಸಿದ್ಧ ಕವಿಯ 'ಬಸವೇಶ್ವರನ ಪವಾಡಗಳು' ಹಾಗೂ ಗುರುಚನ್ನಬಸವನಶಿಷ್ಯ ಕವಿಯ 'ಬಸವ ಪವಾಡ' ದಂತ ಕೆಲವು ಹಸ್ತಪ್ರತಿಗಳು ಪವಾಡವನ್ನು ಕುರಿತು ರಚಿಸಲಾದ ಕಾಲ್ಪನಿಕ ಹಸ್ತಪ್ರತಿಗಳಾಗಿವೆ.

ಶುದ್ಧ ಕಾಲ್ಪನಿಕ ಹಸ್ತಪ್ರತಿಗಳು ಕಥೆಯನ್ನು ಅತ್ಯಂತ ರಮ್ಯವಾಗಿ ಆಕರ್ಷಕವಾಗಿ ಹೇಳುವುದರಿಂದಲೇ ಮಹತ್ವವಾಗುತ್ತವೆ. ಇಂಥ ಕಾಲ್ಪನಿಕ ಕೃತಿ ಹಾಗೂ ಹಸ್ತಪ್ರತಿಗಳಲ್ಲಿ ನಿಜವಾದ ಚರಿತ್ರೆಯ ಅಂಶ ಯಾವುದು ಜನ ಪ್ರತೀತಿಯ ಅಂಶ ಯಾವುದು ಎಂಬುದನ್ನು ಶೋಧಿಸುವುದು ಕೆಲವು ಸಲ ಅಸಾಧ್ಯವಾಗುತ್ತದೆ.

**೨ ಅನ್ಯಾಂಶಗಳನ್ನೊಳಗೊಂಡ ಹಸ್ತಪ್ರತಿಗಳು:**

**ಅ) ಧರ್ಮದ ಜೊತೆಗೆ ಕಾವ್ಯಹೇಳುವ ಕೃತಿಗಳು:**

"ಬೆಳಗುವಿನಿಲ್ಲಿ ಲೌಕಿಕಮಂ ಅಲ್ಲಿ ಜಿನಾಗಮಮಂ" ಎಂದು ಘೋಷಿಸಿಕೊಂಡ ಮಹಾಕವಿ ಪಂಪನೇ 'ಧರ್ಮಮಂ,ಕಾವ್ಯಧರ್ಮಮಂ' ಎಂದು ಹೇಳುವದನ್ನೂ ಮರೆತಿಲ್ಲ. ಧರ್ಮದ ಜೊತೆಗೆ ಕಾವ್ಯವನ್ನು ಹೇಳುವ ಸಂದರ್ಭದಲ್ಲಿ ಸಹಜವಾಗಿ ಈ ಮಾತನ್ನು ಹೇಳಿದ. ಆದರೆ ಧರ್ಮಕ್ಕಾಗಿಯೇ ಒಂದು ಮಾದರಿಯನ್ನು ಕಾವ್ಯಕ್ಕಾಗಿಯೋ ಇನ್ನೊಂದುಮಾದರಿಯನ್ನು ಸಿದ್ಧಿಸಿಕೊಂಡ ಈ ಕವಿಗಳು"ಧರ್ಮಮಂ, ಕಾವ್ಯಧರ್ಮಮಂ" ಎಂದು ಹೇಳುವ ಪ್ರಸಂಗ ಯಾಕಾಗಿ ನಿರ್ಮಾಣವಾಯಿತೆಂಬುದು ಗಮನಾರ್ಹ ಪ್ರಶ್ನೆ. ಅಂದರೆ ಈ ಕವಿಗಳಿಗೆ ಧರ್ಮವನ್ನು ಹೇಳುವಾಗ ಕಾವ್ಯವು, ಕಾವ್ಯವನ್ನು ಹೇಳುವಾಗ ಧರ್ಮವೂ, ಅಗತ್ಯವಾದ ಪರಿಕರಗಳಾಗಿ ಕಂಡಿರುವ ಸಾಧ್ಯತೆಗಳಿವೆ. ಆದ್ದರಿಂದಲೇ ಪಂಪನ ವಿಕ್ರಮಾರ್ಜುನ ವಿಜಯ "ಧರ್ಮಕ್ಕೆ ಧರ್ಮವೂ ಹೌದು ಚರಿತ್ರೆಗೆ ಚರಿತ್ರೆಯೂ ಹೌದು". ಇದರಿಂದ ಸ್ಪಷ್ಟವಾಗುವ ಒಂದು ಸಂಗತಿಯೆಂದರೆ ಧರ್ಮ ಇಂಥ ಕವಿಗಳ ಪ್ರಧಾನ ಪ್ರಭುತ್ವವಾದರೂ ಎಲ್ಲೋ ಒಂದುಕಡೆ ಪ್ರತಿಭೆ ಇವರನ್ನು ಕಾವ್ಯದ ಕುರಿತಾಗಿ ಬರೆಯಲು ಪ್ರೇರೆಪಿಸಿರಬಹುದು. ಕೆ.ವಿ.ನಾರಾಯಣರು ಅಭಿಪ್ರಾಯಪಡುವಂತೆ "ಸಾಹಿತ್ಯ ಕೃತಿಗಳು ಮನುಷ್ಯ ಸಂಸ್ಕೃತಿಯ ಅಂಗಗಳು. ಅವನ್ನು ಓದುವುದು ಒಂದು ನೆಲೆಯಾದರೆ, ಅವುಗಳನ್ನು ಕುರಿತು ಅಧ್ಯಯನ ಮಾಡುವುದು ಇನ್ನೊಂದು ನೆಲೆ". (೧೯೯೩:೧೩) ಕನ್ನಡದ ಸಂದರ್ಭದಲ್ಲಿಕೆಲವರು ಕಾವ್ಯದ ವಸ್ತು ಧಾರ್ಮಿಕವಾದರೂ ಅವುಗಳಲ್ಲಿ ಕಾವ್ಯಾಂಶಕ್ಕೆ ಹೆಚ್ಚಿನ ಮಹತ್ವ ದೊರೆತು ಶುದ್ಧಕಾವ್ಯಗಳಾಗಿವೆ. ಹೀಗೆ ಶುದ್ಧ ಕಾವ್ಯವೆಂಬ ನೆಲೆಯೇ ನಮ್ಮ ಓದಿನ ಪರಿಭಾಷೆಯಾಯಿತು. ಜನ್ನನ ಯಶೋಧರ ಚರಿತೆ, ರತ್ನಾಕರನ ಭರತೇಶ ವೈಭವ, ಹರಿಹರನ ಗಿರಿಜಕಲ್ಯಾಣ, ರಾಘವಾಂಕನ ಹರಿಶ್ಚಂದ್ರಕಾವ್ಯ, ಚಾಮರಸನ ಪ್ರಭುಲಿಂಗಲೀಲೆ, ಕುಮಾರವ್ಯಾಸನ ಭಾರತ, ಲಕ್ಷ್ಮೀಶನ ಜೈಮಿನಿ ಭಾರತ ಮುಂತಾದ ಕೃತಿಗಳು ಹುಟ್ಟಿಕೊಂಡ ಸಂದರ್ಭವೇ ಒಂದು ನೆಲೆಯಾದರೆ ಇವುಗಳನ್ನು ಕುರಿತ ನಮ್ಮ ಓದಿನ ಪರಿಕ್ರಮವೇ ಬೇರೆಯಾಯಿತು. ಹಸ್ತಪ್ರತಿಗಳನ್ನು ಒಳಗೊಂಡು ಹಳಗನ್ನಡ ಓದಿಗೆ ಸರಿಯಾದ ಸಿದ್ಧಾಂತ ಕ್ರಮಗಳು ಇಲ್ಲವೆಂಬ

ಕೊರಗಿನಲ್ಲಿಯೂ ಇವುಗಳ ಅಧ್ಯಯನ ಮತ್ತಷ್ಟು ಚುರುಕಾಗಬೇಕಾಗಿದೆ. ಇಂಥ ಕೃತಿಗಳಲ್ಲಿ ಕಾವ್ಯ ಮತ್ತು ಧರ್ಮ ಎರಡೂ ನೆಲೆಗಳಿಂದ ಸಂವಹನವನ್ನು ಪರಿಣಾಮಗೊಳಿಸುವ ಕಾರ್ಯ ನಡೆಯುತ್ತಲೇ ಇರುತ್ತದೆ.

**ಬ) ಧರ್ಮದ ಜೊತೆಗೆ ಚರಿತ್ರೆ ಹೇಳುವ ಕೃತಿಗಳು:**

ಧರ್ಮಕ್ಕೂ ಚರಿತ್ರೆಗೂ ಇರುವ ನಂಟು ಈಚಿನದಲ್ಲ. ಆರ್ಯರ ಆಕ್ರಮಣದಿಂದಲೇ ಆರ್ಯ ಧರ್ಮವನ್ನು ಕುರಿತಾಗಿಯೂ ಆರ್ಯನೆಲೆಯಿಂದ ಭಾರತೀಯ ಚರಿತ್ರೆಯನ್ನು ತಿಳಿಯುವ ಪ್ರಯತ್ನಗಳು ನಡೆದಿವೆ. ಪ್ರಾಚೀನ ಕರ್ನಾಟಕದಲ್ಲಿ ಧರ್ಮವನ್ನು ಚರಿತ್ರೆಯ ಮೂಲಕವಾಗಿಯೂ, ಚರಿತ್ರೆಯನ್ನು ಧರ್ಮದ ಮೂಲಕವಾಗಿಯೂ ಹೇಳುವ ವಿಶೇಷ ಪದ್ಧತಿಗಳು ರೂಢಿಯಲ್ಲಿ ಬಂದವು. ಮಧ್ಯಕಾಲೀನ ಹೊತ್ತಿಗೆ ಈ ವ್ಯವಸ್ಥೆ ಶರಣರನ್ನು ಕೇಂದ್ರೀಕರಿಸಿಕೊಂಡು ಬೆಳೆಯಿತು. ಶಿವಶರಣರ ಚರಿತ್ರೆಯನ್ನು ಬಳಸಿಕೊಂಡು ವೀರಶೈವ ಧರ್ಮ ತನ್ನ ಪ್ರಸಾರವನ್ನು ಕೈಗೊಂಡಿತು. ಹಂಪೆಯ ರಾಘವಾಂಕ ಸಿದ್ಧರಾಮಚಾರಿತ್ರವನ್ನು, ಹರಿಹರ ಅನೇಕ ಶಿವಶರಣರ, ಪುರಾತನರ ರಗಳೆಗಳನ್ನು ಸೃಷ್ಟಿಸಿದ್ದು ಈ ಬಗೆಯ ಧೋರಣೆಯಿಂದ. ಧರ್ಮಗೌಣವಾಗಿ ಚರಿತ್ರೆ ಮೇಲುಗೈಯಾಗಿರುವ ಕೆಲವು ಕಾವ್ಯಗಳಿವೆ. ಇವುಗಳಲ್ಲಿ ಚದುರ ಚಂದ್ರಮನ ಕಾರ್ಕಳದ ಗೊಮ್ಮಟೇಶ್ವರ ಚರಿತೆ, ಧರಣಿ ಪಂಡಿತ ಕವಿಯ ಬಿಜ್ಜಳರಾಯ ಚರಿತೆ, ಸಿದ್ಧಕವಿಯ ಸಿರುಮನ ಚರಿತೆ, ಚಾಮಯ್ಯನ ದೇವರಾಜೇಂದ್ರ ಸಾಂಗತ್ಯ, ನೂರೊಂದನ ಸೌಂದರಕಾವ್ಯ, ಬಿಜ್ಜಳರಾಯ ಚರಿತೆ, ಸೊಣ್ಣಬೈರೇಗೌಡನ ಚರಿತೆ ಇವು ಇತಿಹಾಸಕ್ಕೆ ಹೆಚ್ಚು ಮಹತ್ವ ಕೊಡುವ ಕೃತಿಗಳಾದರೂ ಗೌಣವಾಗಿ ಅಲ್ಲಲ್ಲಿ ಧರ್ಮಕ್ಕೆ ಸಂಬಂಧಿಸಿದ ವಿವರವನ್ನು ನೀಡುತ್ತವೆ. ಆದರೆ ನಂಜುಡನ ಕುಮಾರರಾಮನ ಚರಿತೆ, ಪದ್ಮನಾಭನ ಜಿನದತ್ತರಾಯ ಚರಿತೆ, ಭಾರತಿನಂಜನ ಕಂಠೀರವ ನರಸರಾಜ ವಿಜಯ ಮೊದಲಾದವು ಚರಿತ್ರೆಗೆ ಸಂಬಂಧಿಸಿದ ಕೃತಿಗಳಾಗಿವೆ. ಕ್ರಿ.ಶ. ೧೫ನೆಯ ಶತಮಾನದ "ಆಕಾಶ ಭೈರವ ಕಲ್ಪ"ದ ಹಸ್ತಪ್ರತಿಯಲ್ಲಿ ವಿಜಯನಗರದ ಇತಿಹಾಸಕ್ಕೆ ಸಂಬಂಧಿಸಿದ ಕೆಲವು ಸಂಗತಿಗಳಿವೆ. ಬಖೈರುಗಳು, ಕೈಫಿಯತ್ತುಗಳು, ಕಡತಗಳಲ್ಲಿನ ಪ್ರಾರ್ಥನ ಶ್ಲೋಕಗಳಿಂದ ಧರ್ಮವನ್ನು ಕುರಿತಾದ ವಿವರವನ್ನು ತಿಳಿಯಲು ಸಾಧ್ಯವಿದೆ. ಈ ಸಾಮಗ್ರಿಗಳು ಚರಿತ್ರೆಗೆ ಸಂಬಂಧಿಸಿದಾಗಿದ್ದರೂ ಇಂಥ ಭಾಗಗಳಲ್ಲಿ ಧಾರ್ಮಿಕ ಮಹತ್ವವನ್ನು ತಿಳಿಸುವ ಅಪೂರ್ವ ಆಕರಗಳಾಗುತ್ತವೆ. ಹೀಗೆ ಧರ್ಮ ಮತ್ತು ಚರಿತ್ರೆಯನ್ನು ಏಕೀಭವಿಸಿ ಹೇಳುವ ಮಾದರಿಗಳು ಕನ್ನಡ ಸಂದರ್ಭದಲ್ಲಿ ವಿಶಿಷ್ಟವಾಗಿ ನಡೆದಿರುವ ಬಗೆಯನ್ನು ಸರಿಯಾಗಿ ಗುರುತಿಸುವ ಕಾರ್ಯ ನಡೆಯಬೇಕಾಗಿದೆ.

ಅಡಿಟಿಪ್ಪಣಿಗಳು:

೧ ಕೆ. ೭೫೨:ಸಂ: ಎಚ್ ದೇವೀರಪ್ಪ:೧೯೬೨: ಮೈಸೂರು ಪ್ರಾಚ್ಯ ವಿದ್ಯಾ ಸಂಶೋಧನಾಲಯದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ: ಸಂ:೨ ಪುಟ: ೭

೨ ಕೆ.ಎ ೫೪೬ ಅದೇ ಸಂ:೨ ಪುಟ:೧೧೯

೩. ಕೆ.ಬಿ.೪೫೫ ಅದೇ ಸಂ:೩ ಪುಟ:೩೪೭

೪ ಕೆ. ೪೬೮ ಅದೇ ಸಂ:೩ ಪುಟ:೩೪೮

೫ ಕೆ. ೯೧೪: ಸಂ: ಎಸ್ .ಶಿವಣ್ಣ:೧೯೮೨ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ. ಬೆಂಗಳೂರು ವಿಶ್ವವಿದ್ಯಾಲಯ ಸಂ:೧ ಪುಟ:೨೯

೬ ಕೆ. ೨೬ ಅದೇ ಪುಟ:೯

೭ ಕೆ. ೩೦ ಅದೇ ಪುಟ:೧೦೦

೮ ಕೆ. ೧೨ ಅದೇ ಪುಟ:೨೩೦

೯ ಕೆ. ೯:೭ ಅದೇ ಪುಟ:೨೮೧

೧೦ ಕೆ ೧೭೧ ಅದೇ ಪುಟ:೩೯೫

೧೧ ಕೆ ೧೬. ಸಂ: ಎಚ್ ದೇವೀರಪ್ಪ: ೧೯೬೨: ಮೈಸೂರು ಪ್ರಾಚ್ಯ ವಿದ್ಯಾ ಸಂಶೊಧನಾಲಯದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ: ಸಂ:೩: ಪುಟ:೧೨೯

೧೨ ಕೆ ೧೬. ಅದೇ ಸಂ:೩ ಪುಟ:೧೪೩

೧೩ ಕೆ ೪೪೩:೧ ಅದೇ ಸಂ:೩ ಪುಟ:೧೨೭

೧೪ ಕೆ ೧೮೧:೧ ಅದೇ ಸಂ:೩ ಪುಟ:೯೭

೧೫ ಕೆ ೨೬೫ ಅದೇ ಸಂ:೪ ಪುಟ:೬೨

೧೬ ಕೆ.ಎ ೧೯೦:೭ ಅದೇ ಸಂ:೪ ಪುಟ:೭೧

೧೭ ಕೆ.ಎ ೧೩ ಅದೇ ಸಂ:೪ ಪುಟ:೫೦೪

೧೮ ಕೆ.ಎ ೮೭:೨ ಅದೇ ಸಂ:೪ ಪುಟ:೫೧೦

೧೯ ಕೆ.ಎ ೩೧೬ ಅದೇ ಸಂ:೩ ಪುಟ:೪೨೪

೨೦ ಕೆ. ೧೯೨ ಅದೇ ಸಂ: ೪ ಪುಟ:೫೧೭

೨೧ ಕೆ.ಬಿ. ೨೬೮ ಅದೇ ಸಂ:೪ ಪುಟ:೪೧೬

೨೨ ಕರ್ನಾಟಕ ಕವಿಚರಿತೆ ಸಂ ೨ ಆರ್ ನರಸಿಂಹಾಚಾರ್:೧೯೭೭, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಸಂ:೨ ಪು:೪೮೧

೨೩ ಕೆ.ಎ ೫೧೪:೨ ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ: ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೨೨ ಕರ್ನಾಟಕ ಕವಿಚರಿತೆ ಸಂ೨: ಆರ್ ನರಸಿಂಹಾಚಾರ್ :೧೯೭೭, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ಸಂ:೨ ಪು:೪೮೧

೨೩ ಕೆ.ಎ ೫೧೪:೨ ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ: ಮೈಸೂರು ವಿಶ್ವವಿದ್ಯಾಲಯ, ಮೈಸೂರು.

೨೪ ಕೆ.ಬಿ ೨೮೫ ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿ ಮೈಸೂರು.

೨೫ ಕೆ.ಬಿ ೪೨೪ :ಎಚ್ ದೇವೀರಪ್ಪ: ೧೯೬೨ ಮೈಸೂರು ಪ್ರಾಚ್ಯ ವಿದ್ಯಾ ಸಂಶೊಧನಾಲಯದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ: ಸಂ:೪ ಪುಟ:೧೧೨

೨೬ ಕೆ.ಎ ೬೭ ಅದೇ ಸಂ:೪ ಪುಟ:೫೪೯

೨೭ ಕೆ.ಬಿ. ೨೩೦ ಅದೇ ಸಂ:೨ ಪುಟ:೨

೨೮ ಕೆ.ಎ ೨೬೮ ಅದೇ ಸಂ:೨ ಪುಟ:೫೯

೨೯ ಕೆ.ಬಿ. ೪೮೨ ಅದೆ ಸಂ:೨ ಪುಟ:೨೨೦

೩೦ ಕೆ.ಎ. ೧೨೭ ಅದೇ ಸಂ:೨ ಪುಟ:೬೦

೩೧ ಕೆ.ಎ. ೧೨೫ ಅದೇ ಸಂ:೨ ಪುಟ:೫೭

೩೨ ಕೆ.ಎ. ೩೨೦ ಅದೇ ಸಂ:೧ ಪುಟ:೭೧

೩೩ ಕೆ.ಎ. ೨೬೫ ಅದೇ ಸಂ:೧ ಪುಟ:೨೪೫

೩೪ ಕೆ.ಎ ೨೨೬ ಅದೇ ಸಂ:೨ ಪುಟ:೬೨

೩೫ಕೆ. ೩೩ ಅದೇ ಸಂ:೨ ಪುಟ:೧

೩೬ ಕೆ. ೨೩೩ ಅದೇ ಸಂ:೨ ಪುಟ:೫

೩೭ ಕೆ ೧೦೯೨ ಅದೇ ಸಂ:೨ ಪುಟ:೨೨೯

೩೮ ಕೆ.ಬಿ.೬೨ ಅದೇ ಸಂ:೧ ಪುಟ:೨೨೫

ಅಧ್ಯಾಯ: ನಾಲ್ಕು

## ಹಸ್ತಪ್ರತಿಗಳ ತೌಲನಿಕ ಅಧ್ಯಯನ

ಈ ಅಧ್ಯಾಯದಲ್ಲಿ ಮೂರು ಪರಂಪರೆಯ ಹಸ್ತಪ್ರತಿಗಳು ಪಡೆದುಕೊಂಡಿರುವ ಬೇರೆ ಬೇರೆ ವ್ಯತ್ಯಾಸಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

ಹಸ್ತಪ್ರತಿಗಳ ಸಮಾನ ಅಂಶಗಳು
ಹಸ್ತಪ್ರತಿಗಳ ಭಿನ್ನ ಅಂಶಗಳು
ಹಸ್ತಪ್ರತಿಗಳ ವಿಶಿಷ್ಟ ಅಂಶಗಳು.

ಈ ಮೂರು ನೆಲೆಯಲ್ಲಿ ಹಸ್ತಪ್ರತಿಗಳ ವ್ಯತ್ಯಾಸ ಸಂಬಂಧಗಳನ್ನು ಈ ಕೆಳಗಿನಂತೆ ಕಂಡುಕೊಳ್ಳಲಾಗಿದೆ.

**೧ ಹಸ್ತಪ್ರತಿಗಳ ಸಮಾನ ಅಂಶಗಳು:**

೧.೦ ಜೈನ ವೀರಶೈವ ಮತ್ತು ವೈದಿಕ ಪರಂಪರೆಯ ಹಸ್ತಪ್ರತಿಗಳು ಬೇರೆ ಬೇರೆ ವಿಷಯ ಸಂಪತ್ತನ್ನು ವಿವರಿಸುವುದರ ಮೂಲಕ ವೈವಿಧ್ಯತೆಯನ್ನು ಪಡೆದಿವೆ.

೧.೧ ಜೈನ ಹಸ್ತಪ್ರತಿಗಳು ಜಿನ ತೀರ್ಥಂಕರ ಚರಿತೆ, ತ್ರಿಷಷ್ಟಿ ಶಲಾಕ ಪುರುಷರ ಚರಿತೆ, ಭವಾವಳಿಯಂತ ಧಾರ್ಮಿಕ ವಿಷಯವನ್ನೂ ರಾಮಾಯಣ, ಮಹಾಭಾರತದಂತಹ ಲೌಕಿಕ ವಿಷಯವನ್ನು ವಿವರಿಸುತ್ತವೆ.

೧.೨ ವೀರಶೈವ ಹಸ್ತಪ್ರತಿಗಳು ಶಿವಲೀಲೆ, ಶಿವಶರಣರ, ಶಿವಭಕ್ತರ, ೬೩ ಪುರಾತನರ ಚರಿತ್ರೆ, ಷಟಸ್ಥಲ, ಅಷ್ಟಾವರಣದಂತ ವಿಷಯವನ್ನು ಬೋಧಿಸುತ್ತವೆ.

೧.೩ ವೈದಿಕ ಹಸ್ತಪ್ರತಿಗಳು ರಾಮಾಯಣ,ಮಹಾಭಾರತ, ಭಾಗವತ, ಭಗವದ್ಗೀತೆ, ವಿಷ್ಣುಭಕ್ತಿ ನೀತಿಬೋಧೆಯಂತವಿಷಯವನ್ನು ಪ್ರಕಟಿಸುತ್ತವೆ.

೧.೪ ಪಂಚವಿಧ ಕಲ್ಪನೆಯಲ್ಲಿ ಜೈನ ಹಸ್ತಪ್ರತಿಗಳು ಪಂಚಕಲ್ಯಾಣವನ್ನೂ, ವೀರಶೈವ ಹಸ್ತಪ್ರತಿಗಳು ಪಂಚಾಚಾರವನ್ನು ವೈದಿಕ ಹಸ್ತಪ್ರತಿಗಳು ಪಂಚಭಾವ ಕಲ್ಪನೆಯನ್ನು ವರ್ಣಿಸುತ್ತವೆ.

೧.೫ ಎಲ್ಲ ಹಸ್ತಪ್ರತಿಗಳು ವಿವಿಧ ಬಗೆಯ ರೂಪಗಳನ್ನು ಪ್ರಯೋಗಿಸಿಕೊಂಡಿವೆ.

೧.೬ ಎಲ್ಲ ಬಗೆಯ ಹಸ್ತಪ್ರತಿಗಳು ಸಾಮಾನ್ಯವೆನ್ನಬಹುದಾದ ಲೇಖ್ಯ ಸಾಮಗ್ರಿಗಳನ್ನು ಬಳಸಿಕೊಂಡಿವೆ.

೧.೭ ಆಯಾ ಧಾರ್ಮಿಕ ಹಸ್ತಪ್ರತಿಗಳಿಗೆ ವಿಶಿಷ್ಟವಾದ ಹಸ್ತಪ್ರತಿ ಭಂಢಾರಗಳಿವೆ.

೧.೮ ಮೂರು ಧರ್ಮದ ಹಸ್ತಪ್ರತಿಗಳ ಉದ್ದೇಶ ಧರ್ಮಬೋಧನೆ ಮತ್ತು ಧರ್ಮ ಪ್ರಚಾರ.

೧.೯ ಆಯಾ ಪ್ರತಿಕಾರರು ತಮ್ಮ ಸಾಂಸ್ಕೃತಿಕ ಹಿನ್ನೆಲೆಯಲ್ಲಿಯೇ ಪ್ರತಿಗಳನ್ನು ನಕಲು ಮಾಡಿದ್ದಾರೆ.

೧.೧೦ ತಮ್ಮ ತಮ್ಮ ಧಾರ್ಮಿಕ ಪರಿಭಾಷೆಯಲ್ಲಿ ಹಸ್ತಪ್ರತಿಗಳ ಆರಂಭಿಸುತ್ತಾರೆ. ಬರವಣಿಗೆಯ ಆದಿ ಅಂತ್ಯಗಳ ಸ್ವರೂಪ ಸಾಮಾನ್ಯವಾಗಿ ಒಂದೇ ಬಗೆಯಾಗಿರುತ್ತದೆ.

೨ ಹಸ್ತಪ್ರತಿಗಳ ಭಿನ್ನ ಅಂಶಗಳು:

೧.೦ ಶೈಲಿ ಸಂದರ್ಭದಲ್ಲಿ ಮೂರು ಬಗೆಯ ಹಸ್ತಪ್ರತಿಗಳ ಮಾದರಿ ಭಿನ್ನವಾಗಿದೆ.

೧.೧ ಜೈನ ಹಸ್ತಪ್ರತಿಗಳು ಪೂರ್ವದ ಹಳಗನ್ನಡ, ಹಳಗನ್ನಡ ಹಾಗೂ ಸಂಸ್ಕೃತ ಪರಿಸರದ ಶೈಲಿಯಲ್ಲಿ ರಚಿತವಾಗಿವೆ.

೧.೨ ವೀರಶೈವ ಹಸ್ತಪ್ರತಿಗಳು ನಡುಗನ್ನಡ ಹಾಗೂ ದೇಸಿ ಛಂದಸ್ಸಿನ ಶೈಲಿಹೊಂದಿವೆ.

೧.೩ ವೈದಿಕ ಹಸ್ತಪ್ರತಿಗಳು ಸರಳಗನ್ನಡವಾಗಿಯೂ ಸಂಸ್ಕೃತ ಭೂಯಿಷ್ಠವಾಗಿವೆ.

೧.೪ ಮೂರು ಪರಂಪರೆಯ ಹಸ್ತಪ್ರತಿಗಳಲ್ಲಿ ಸ್ಖಾಲಿತ್ಯದ ಪ್ರಮಾಣ ಭಿನ್ನವಾಗಿದೆ.

೧.೫ ಜೈನ ಹಸ್ತಪ್ರತಿಗಳಲ್ಲಿ ಕೆಲವರೆ ಪ್ರತಿ ಮಾಡುವದರಿಂದ ಅಲ್ಲಿ ಸ್ಖಾಲಿತ್ಯದ ಪ್ರಮಾಣ ಕಡಿಮೆ.

೧.೬ ವೀರಶೈವ ಹಸ್ತಪ್ರತಿಗಳಲ್ಲಿ ಅನೇಕ ಶಿಷ್ಯರು ನಕಲುಗೊಳಿಸುವ ಕಾರ್ಯದಲ್ಲಿ ತೊಡಗುವದರಿಂದ ಅಲ್ಲಿ ಹೆಚ್ಚು ಸ್ಖಾಲಿತ್ಯಗಳು ಕಂಡುಬರುತ್ತವೆ.

೧.೭ ವೈದಿಕ ಸಂದರ್ಭದಲ್ಲಿ ಕೃತಿ ನಿರ್ಮಾಣ ಹಾಗೂ ನಕಲುಗೊಳಿಸುವ ಕಾರ್ಯವನ್ನು ಪಂಡಿತ ಮಾನ್ಯ ಹಾಗೂ ಪುರೋಹಿತವರ್ಗದವರು ನಿರ್ಮಿಸುವದರಿಂದ ಅಲ್ಲಿ ಸ್ಖಾ ಲಿತ್ಯದ ಪ್ರಮಾಣ ಮಧ್ಯಮದಲ್ಲಿ ಕಂಡುಬರುತ್ತದೆ.

೧.೮ ಜೈನ ಹಸ್ತಪ್ರತಿಗಳು ರಾಜಾಶ್ರಯದಲ್ಲಿ ಬರವಣಿಗೆಯ ಪೋಷಣೆಯನ್ನು ಪಡೆದುವು.

೧.೯ ವೀರಶೈವ ಹಸ್ತಪ್ರತಿಗಳು ಜನಾಶ್ರಯದಲ್ಲಿ ಬರವಣಿಗೆಯ ಪೋಷಣೆಯನ್ನು ಪಡೆದವು.

೧.೧೦ ವೈದಿಕ ಹಸ್ತಪ್ರತಿಗಳಿಗೆ ಭಕ್ತಿ ಪಂಥದಂತ ಒಂದು ವಿಶಿಷ್ಟ ಚಳುವಳಿಯ ಪೋಷಣೆ ಯಾಯಿತು.

೩. ಹಸ್ತಪ್ರತಿಗಳ ವಿಶಿಷ್ಟ ಅಂಶಗಳು:

೧.೦ ಜೈನ ಸಂದರ್ಭದಲ್ಲಿ ಧವಳ, ಜಯಧವಳ, ಮಹಾಧವಳದಂತ ಹಸ್ತಪ್ರತಿಗಳೂ, ವೀರಶೈವ ಸಂದರ್ಭದಲ್ಲಿ ಕೊಡೇಕಲ್ಲ ಬಸವಣ್ಣನ ಪರಂಪರೆಯ ಹಸ್ತಪ್ರತಿಗಳು ಏಕೈಕ ಹಸ್ತಪ್ರತಿಗಳಾಗಿ ಮಹತ್ವವಾದರೆ, ವೈದಿಕ ಸಂದರ್ಭದಲ್ಲಿ "ಗ್ಯಾರೇಟ್ ನಂತ ಕಲ್ಲಚ್ಚಿನ ಪ್ರತಿಗಳು ಗಮನ ಸೆಳೆಯುತ್ತವೆ.

೧.೧ ಗಮಕಿಗಳೆಂಬ ವಿಶಿಷ್ಟ ಬಗೆಯ ವರ್ಗ ವೀರಶೈವ ಮತ್ತು ವೈದಿಕ ಹಸ್ತಪ್ರತಿಗಳನ್ನು ಓದಲು ಸ್ಥಾಪಿತಗೊಳ್ಳುತ್ತದೆ. ಜೈನರಲ್ಲಿ ಈ ಕಾರ್ಯವನ್ನು ವ್ಯಾಖ್ಯಾನಕಾರರೇ ನಿರ್ವಹಿಸುತ್ತಿದ್ದರು.

೧.೨ ಪೊನ್ನನ ಶಾಂತಿ ಪುರಾಣವನ್ನು ಸಾವಿರ ಪ್ರತಿ ಮಾಡಿಸಿ ಹಂಚಿದ ಅತ್ತಿಮಬ್ಬೆ ಮತ್ತು ವಚನ ಭಂಡಾರಿ ಶಾಂತರಸರು ಶರಣರು ನುಡಿದ ವಚನಗಳನ್ನು ಪ್ರತಿ ಮಾಡಿಸಿದ ಉದಾಹರಣೆ ವೈದಿಕ ಸಂದರ್ಭದಲ್ಲಿಲ್ಲ.

೧.೩ ಹಸ್ತಪ್ರತಿಗಳು ವೈದಿಕರಲ್ಲಿ ದಾಸಕೂಟ ಮತ್ತು ವ್ಯಾಸಕೂಟವೆಂದು ವರ್ಗೀಕರಣವಾಗಿದ್ದು ವಿಶಿಷ್ಟ ಸಂಗತಿಯಾಗಿದೆ೧.೪ ಜೈನ ಹಸ್ತಪ್ರತಿಗಳಿಗೆ ಕಾರಣವಾದ ಅತ್ತಿಮಬ್ಬೆಯಂತ ಸ್ತ್ರೀಪೋಷಕರು ಮುಂದೆ ಹುಟ್ಟಿಕೊಳ್ಳಲಿಲ್ಲ.

೧.೫ ಜೈನ ಮತ್ತು ವೀರಶೈವರಲ್ಲಿಲ್ಲದ, ವೈದಿಕ ಸಂದರ್ಭದಲ್ಲಿ ಮಾತ್ರವಿದ್ದ ಸ್ತ್ರೀ ಪ್ರತಿಕಾರರ ಉದಾಹರಣೆ ಅಪರೂಪದಸಂಗತಿಯಾಗಿದೆ.

ಅಧ್ಯಾಯ.೪ ಹಸ್ತಪ್ರತಿಗಳ ತೌಲನಿಕ ಅಧ್ಯಯನ:

| ಕ್ರ.ಸಂ. ಸ್ವರೂಪ | ಜೈನ | ವೀರಶೈವ | ವೈದಿಕ |
|---|---|---|---|
| ೧. ವಿಷಯ | ಜಿನ, ತೀರ್ಥಕರ, ತ್ರಿಷಷ್ಠಿ ಶಲಾಕ ಪುರುಷರ ಚರಿತೆ, ಭವಾವಳಿ, ರಾಮಾಯಣ, ಮಹಾಭಾರತ, | ಶಿವಲೀಲೆ, ಶಿವಶರಣರು, ಶಿವಭಕ್ತಿ,ಷಟ್ಸ್ಥಲ ಅಷ್ಟಾವರಣ ಇತ್ಯಾದಿ | ಆಳ್ವಾರರು, ರಾಮಾಯಣ, ಮಹಾಭಾರತ, ಭಗವದ್ಗೀತೆ ಭಾಗವತ,ವಿಷ್ಣುಭಕ್ತಿ ಇತ್ಯಾದಿ |
| ೨. ಪ್ರಕಾರ | ಚಂಪು, ಸಾಂಗತ್ಯ ಗಧ್ಯ,ವಚನ | ವಚನ,ರಗಳೆ,ಷಟ್ಪದಿ ಸಾಂಗತ್ಯ ಸ್ವರವಚನ | ಷಟ್ಪದಿ,ಸಾಂಗತ್ಯ ಕೀರ್ತನ, ಉಗಾಭೋಗ, ಸ್ವರವಚನ ಇತ್ಯಾದಿ ಇತ್ಯಾದಿ. |
| ೩. ಶೈಲಿ | ಪೂರ್ವದ ಹಗಳಗನ್ನಡ,ಹಳಗನ್ನಡ ಸಂಸ್ಕೃತದಪರಿಸರ | ನಡುಗನ್ನಡ, ಆಡುನುಡಿ | ಸರಳಗನ್ನಡ, ಸಂಸ್ಕೃತ ಭೂಯಿಷ್ಠತೆ. |
| ೪. ಆರಂಭ | ಶ್ರೀ ವೀತಾರಾಗಾಯ:ನಮಃ ಶ್ರೀಮತ್ಪಂಚಪರಮೇಷ್ಠಿ | ಶ್ರೀ ಗುರಬಸವಲಿಂಗಾಯ ನಮಃ | ಶ್ರೀ ರಮಣ ಅಥವಾ ವೈದಿಕ ಪ್ರಾರ್ಥನೆ ವಿಷ್ಣುಸ್ತುತಿ. |
| ೫. ನಿರೂಪಣಾಕ್ರಮ | ಮಾರ್ಗ ರೀತಿ | ದೇಸಿ ಮಾದರಿ | ಆಡುನುಡಿ |
| ೬. ಬರವಣಿಗೆಗೆ ಪೋಷಣೆ | ರಾಜಾಶ್ರಯ | ಜನಾಶ್ರಯ | ಭಕ್ತಿಪಂಥ |
| ೭. ಪಂಚಕಲ್ಪನೆಗಳು | ಪಂಚಕಲ್ಯಾಣ | ಪಂಚಾಚಾರ | ಪಂಚಭಾವಗಳು. |
| ೮. ಗೀಯತೆ | ಇಲ್ಲ | ಇದೆ | ಇದೆ. |
| ೯. ಧರ್ಮಭೋಧನೆ | ಇದೆ | ಇದೆ | ಇದೆ. |
| ೧೦ ಲೌಕಿಕ | ಇದೆ (ಪ್ರಧಾನ) | ಇಲ್ಲ (ಧರ್ಮಪ್ರಧಾನ) | ಇಲ್ಲ(ಭಾಗವತ ಪ್ರಧಾನ) |
| ೧೧ ವಿಶಿಷ್ಟಾದ್ವೈತ | ಹೇಳುವುದಿಲ್ಲ | ಹೇಳುತ್ತವೆ | ಹೇಳುತ್ತವೆ. |
| ೧೨ ಪ್ರಸರಣ | ಮಾಧ್ಯಮ ಧರ್ಮ-ತತ್ವ-ನೀತಿ | ಧರ್ಮ,ತತ್ವ,ನೀತಿ | ಧರ್ಮ,ತತ್ವ ನೀತಿ, |

| | | | |
|---|---|---|---|
| ೧೩ ಲೇಖನ ಸಾಮಗ್ರಿ | ಕಂಠ. ಮಸಿ, ಲೇಖನಿ | ಕಂಠ ಮಸಿ, ಲೇಖನಿ | ಲೆಕ್ಕಣಿಕೆ, ದೌತಿ ಮಸಿ. |
| ೧೪ ಬರವಣಿಗೆ ಮಾಧ್ಯಮಗಳು | ತಾಳೆಪತ್ರ, ಬೂರ್ಜ್ವ ಪ್ರತಿಗಳು ತಾಡಪತ್ರ | ಕೋರಿಕಾಗದ, ತಾಳೆಪತ್ರ ಕಾಗದಪತ್ರಿಗಳು | ಓಲೆಪ್ರತಿಗಳು, ದಪ್ಪಕಾಗದ ಪ್ರತಿಗಳು |
| ೧೫ ಬರವಣಿಗೆಯ ಸ್ಥಳಗಳು | ಚೈತ್ಯಾಲಯದ ಮುಂದೆ ಮಾನ ಸ್ತಂಭದ ಜಗತಿಯ ಮೇಲೆ ಬಸದಿಗಳಲ್ಲಿ | ದೇವಾಲಯ ಮಠಗಳಲ್ಲಿ | ದೇವಾಲಯ, ಮಠ, ಮತ್ತು ಗರ್ಭಗುಡಿಯಲ್ಲಿ. |
| ೧೬ ಪ್ರತಿಮಾಡುವ ಸ್ಥಳಗಳುಮಾಡುವ | ಬಸದಿ, ಚೈತ್ಯಾಲಯ | ಕೂಲಿಮಠ, ಸಾಲಿಮಠ, ಓದಿಸುವ ಮಠ | ವೈದಿಕ ಮಠ ಮಾನ್ಯಗಳಲ್ಲಿ |
| ೧೭ ಸಂರಕ್ಷಿತ ಸ್ಥಳಗಳು ಮಠಗಳು | ಮೂಡಬಿದಿರೆಯಠ ಸಿದ್ಧಾಂತ | ಕೋಡೇಕಲ್ಲ ಬಸವಣ್ಣಮಠ | ತಿಳಿದಿಲ್ಲ |
| ೧೮ ಸ್ಖಲಿತ್ಯ ಸ್ವರೂಪ | ಕಡಿಮೆ | ಹೆಚ್ಚು | ಮಧ್ಯಮ. |
| ೧೯ ಸ್ಖಲಿತದ್ಯಕಾರಣ | ಏಕವ್ಯಕ್ತಿ ನಿರ್ಮಾಣ | ಹಲವಾರು ವ್ಯಕ್ತಿಗಳಿಂದ ಪ್ರತಿ ನಿರ್ಮಾಣ | ಕೆಲವೆ ವ್ಯಕ್ತಿಗಳಿಂದ ಪ್ರತಿ ನಿರ್ಮಾಣ. |
| ೨೦ ಏಕೈಕ ಹಸ್ತಪ್ರತಿಗಳು | ಧವಳ, ಜಯಧವಳ, ಮಹಾಧವಳ | ಕೊಡೇಕಲ್ಲ ಬಸವಣ್ಣನವರ ಹಸ್ತಪ್ರತಿಗಳು | ಗ್ಯಾರೇಟ್ ಪ್ರತಿ. |
| ೨೧ ಗ್ರಂಥದಾನಮಾಡಿದವರು | ಅತ್ತಿಮಬ್ಬೆ ಪೊನ್ನನ ಶಾಂತಿಪುರಾಣ ಬರೆಸಿ ಗ್ರಂಥದಾನ ಮಾಡಿದಳು | ವಚನ ಭಂಡಾರಿ ಶಾಂತರಸರು ಶರಣರು ನುಡಿದ ವಚನಗಳನ್ನು ಪ್ರತಿಮಾಡಿದರು. | ಉದಾಹರಣೆ ಇಲ್ಲ. |
| ೨೨ ಗಮಕಿಗಳು | ಇರಲಿಲ್ಲ | ಇದ್ದರು | ಇದ್ದರು. |
| ೨೩ ಪ್ರತಿಕಾರರ ಧರ್ಮ | ಮಗಸು ಸಂಪತ್ತು ಹೆಚ್ಚಲು ಕೆಲವು ಜ್ಞಾನ ಲಭಿಸಲು ಪ್ರಭುಗಳಿಗಾಗಿ ಸ್ನೇಹಿತರ ಬಂಧುಗಳ ಉಪ-ಯೋಗಕ್ಕಾಗಿ. | ತಮ್ಮ ಜೊತೆಗೆ ಗುರುಗಳ ಮಠದ ಶಾಸ್ತ್ರಸಂಪತ್ತು ಹೆಚ್ಚಲು ಪುಣ್ಯ ಲಭಿಸಲು | ಅದೇ. |
| ೨೪ ಪ್ರತಿಕಾರರ ಹಾರೈಕೆ | ಇದೆ | ಇದೆ | ಇದೆ. |
| ೨೫ ಸ್ತ್ರಿ ್ರೀಪ್ರತಿಕಾರರು | ಉದಾಹರಣೆ ಇಲ್ಲ | ಉದಾಹರಣೆ ಇಲ್ಲ | ರಾಮನ ಸಾಂಗತ್ಯವ ಬರೆದವಳು ಓದಿಸುವ ಗುರು ಬಸವಪ್ಪ ದೇವರ ಮಗಳು ನಿಂಗಮ್ಮ |
| ೨೬ ಸ್ತ್ರಿ ್ರೀಪೋಷಕರು | ಇದ್ದಾರೆ ಅತ್ತಿಮಬ್ಬೆ | ಇಲ್ಲ | ಇಲ್ಲ |
| ೨೭ ಹಸ್ತಪ್ರತಿ ಭಂಡಾರಗಳು | ಶ್ರವಣಬೆಳ್ಗೊಳ, ಮೂಡುಬಿದಿರೆ ಹೊಂಬುಜ ಪಾಂಗ ಕಾರಂಜೆಯಾ ಕಾರ್ಕಳ ಮಠ | ಸಿರಿಗೆರೆಯ ಬೃಹನ್ಮಠ ಚಿತ್ರದುರ್ಗದ ಮುರುಘಾ ಉರುವಕೊಂಡ ಮಠ ಶಿವಯೋಗಮಂದಿರ | ಶೃಂಗೇರಿ, ಉಡುಪಿ ಮೇಲುಕೋಟೆ ರಾಮಚಂದ್ರಪುರ |
| ೨೮ ವೈವಿಧ್ಯತೆ | ಇದೆ | ಇದೆ | ಇದೆ. |

## ಅಧ್ಯಾಯ: ಐದು

## ಸಮಾರೋಪ

ಒಟ್ಟಾರೆ ಅಧ್ಯಯನವನ್ನು ಮೂರು ಕವಲುಗಳಾಗಿ ವಿಭಾಗಿಸಿಕೊಳ್ಳಲಾಗಿದೆ. ಈ ಮೂರು ವಿಭಾಗಗಳಲ್ಲಿ ಕನ್ನಡ ಹಸ್ತಪ್ರತಿಗಳು ಕಟ್ಟಿಕೊಡುವ ಸಾಂಸ್ಕೃತಿಕ ಮಹತ್ವತೆಯನ್ನು ಕೂಲಂಕಷವಾಗಿ ವಿಶ್ಲೇಷಿಸಲಾಗಿದೆ.ಪ್ರಸ್ತುತ ಅಧ್ಯಯನದಲ್ಲಿ ಹೆಚ್ಚಿನ ಒತ್ತುಕೊಟ್ಟಿರುವುದು ಆಯಾಕಾಲಘಟ್ಟದಲ್ಲಿ, ಆಯಾ ಹಸ್ತಪ್ರತಿಗಳು ಎತ್ತಿ ತೋರುವ ವಿಷಯ ಮತ್ತು ರೂಪ ಈ ಕುರಿತು ಗಮನಿಸಲಾಗಿದೆ. ಸಾಮಾನ್ಯವಾಗಿ ವೀರಯುಗ ಎಂದು ಗುರುತಿಸಿಕೊಳ್ಳುವ ೧೦ನೆಯ ಶತಮಾನದಲ್ಲಿ ರಚನೀಕೃತಗೊಂಡ ಹಸ್ತಪ್ರತಿಗಳು ಚಂಪು ರೂಪ ಮಾಧ್ಯಮವನ್ನು ಹೆಚ್ಚು ಅಳವಡಿಸಿಕೊಂಡಿವೆ. ಕಾರಣ ಯುದ್ಧ ಪ್ರೇರಣೆ, ಸ್ವಾಮಿನಿಷ್ಠೆ, ವೀರತ್ವ ಮುಂತಾದ ಮೌಲ್ಯಿಕ ಅಂಶಗಳನ್ನು ಪ್ರೇರೇಪಿಸುವಲ್ಲಿ ಈ ರೂಪವು ಹೆಚ್ಚು ಅನುಕೂಲಕರವಾಗಿತ್ತು. ಹೀಗಾಗಿ ಚಂಪು ಪ್ರಣೀತ ವೀರ ಕಾವ್ಯಗಳು ಆಶ್ರಯಿತ ರಾಜರನ್ನು ಬೆಂಬಲಿಸಿ ಹುಟ್ಟಿಕೊಂಡವು. ಜಿನಧರ್ಮಕ್ಕಾಗಿ ಧಾರ್ಮಿಕ ಕಾವ್ಯಗಳು ಹುಟ್ಟಿಕೊಂಡರೆ;ಯುದ್ಧ, ಪ್ರಜಾಪಾಲನೆಯಂತಹ ಲೌಕಿಕ ಕೃತಿಗಳು ರಾಜಕೇಂದ್ರಿತವಾಗಿ ರಚನೆಗೊಂಡವು. "ರಾಜಾ ಪ್ರತ್ಯಕ್ಷ ದೇವತಾಃ" ಎನ್ನುವ ಪ್ರಮುಖ ಪರಿಕಲ್ಪನೆ ಇಂತಹ ಕೃತಿಗಳ ಹಿಂದಿನ ಆಶಯವಾಗಿತ್ತು .ಧಾರ್ಮಿಕ ವಲಯದಲ್ಲಿ, ಜಿನ ಮುಖ್ಯನಾದರೆ, ದೈನಂದಿನ ಬದುಕಿಗೆ ರಾಜ ಪ್ರಮುಖನಾಗಿದ್ದ.

ವೀರಯುಗದ ನಂತರ ಅಂದರೆ ೧೨ನೆಯ ಶತಮಾನದ ಹೊತ್ತಿಗೆ ಈ ಪರಿಕಲ್ಪನೆ ಬದಲಾಯಿತು. ವಚನ ಕ್ರಾಂತಿ ಹೊಸ ಸಮಾಜದ ಹೊಸ ಮೌಲ್ಯಗಳಿಗೆ ಜನ್ಮ ನೀಡಿತು. "ರಾಜಾ ಪ್ರತ್ಯಕ್ಷ ದೇವತಾಃ" ಎನ್ನುವ ಕಲ್ಪನೆ ಹಿಂದೆ ಸರಿದು ರಾಜನಿಗಿದ್ದ ಸಕಲ ವೈಭವಗಳೆಲ್ಲ ದೇವರಿಗೆ ಮೀಸಲಾದವು. ವಚನ ಕ್ರಾಂತಿ ಲೌಕಿಕ ಎನ್ನಬಹುದಾದ ರಾಜತ್ವವನ್ನು ಧಿಕ್ಕರಿಸದಂತೆ ಕಂಡರೂ ಸ್ಥಾವರ ಲಿಂಗ ಕಲ್ಪನೆಯ ಮೂಲಕ ಅಲೌಕಿಕ ನೆಲೆಯಲ್ಲಿ ದೇವರನ್ನು ರಾಜನ ಸರಿಸಮಾನವಾಗಿ ನಿಲ್ಲಿಸಿವೆ. ವಚನ ಕ್ರಾಂತಿಯ ನಂತರ ಇದು ಇನ್ನೂ ಸ್ಪಷ್ಟವಾಯಿತು. ರಾಜನಿಗಿದ್ದ ಅಂಗಭೋಗ, ರಂಗಭೋಗ, ರಾಜನರ್ತಕಿಯರಂತಹ ವೈಭವಗಳು ದೇವರಿಗೆ ಮೀಸಲಾದವು. ದೊಡ್ಡ ದೊಡ್ಡ ದೇವಸ್ಥಾನಗಳು, ಪರಿಚಾರಕರು ಹುಟ್ಟಿದರು. ಪುರೋಹಿತತ್ವ ನೆಲೆ ನಿಂತಿತು.

ಮುಂದೆ ಬಂದ ವೈದಿಕ ಪರಂಪರೆ ಸ್ವಲ್ಪ ಸಡಿಲು ಎನ್ನಬಹುದಾದ ಧಾರ್ಮಿಕ ನೀತಿಯನ್ನು ಅನುಸರಿಸಿದರೂ ಧರ್ಮ ಪ್ರಚಾರ ಅವರ ಪ್ರಮುಖ ಗುರಿಯಾಗಿತ್ತು. ಕೀರ್ತನ ಭಕ್ತಿ ಮುಖ್ಯವಾಯಿತು. ಎಲ್ಲವನ್ನೂ ವಿಷ್ಣುವಿನ ಮೇಲೆ ಹಾಕುವುದರ

ಮೂಲಕ ಜನ ಸಾಮಾನ್ಯರನ್ನು ಸೋಮಾರಿ ಪತದತ್ತ ಪಾಲಿಸಿತು. ಇಂತಹ ಮನೋಧರ್ಮಗಳ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಕೃತಿಗಳು ಒಂದೊಂದು ಕಾಲಘಟ್ಟದ ಸಾಮಾಜಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಅವಸ್ಥಾಂತರಗಳನ್ನು ನಿಚ್ಚಳವಾಗಿ ಗುರುತಿಸುತ್ತಿವೆ. ಮನೋಧರ್ಮ ಬದಲಾ ದಂತೆ ವಿಷಯ, ರೂಪ, ಓದುವ ಮತ್ತು ಕೇಳುವ ವಲಯ ಎಲ್ಲವೂ ಬದಲಾದವು. ಈ ಬದಲಾವಣೆಯೇ ಹಸ್ತಪ್ರತಿಗಳ ಸಾಂಸ್ಕೃತಿಕ ಅಧ್ಯಯನಕ್ಕೆ ಬಹು ಮುಖ್ಯ ಪ್ರೇರಣೆಯಾದವು. ಈ ಪ್ರಯತ್ನವನ್ನು ಪ್ರಸ್ತುತ ಪ್ರಬಂಧದಲ್ಲಿ ಮಾಡಲಾಗಿದೆ.

ಅಧ್ಯಯನದ ಸಂದರ್ಭದಲ್ಲಿ ಹಸ್ತಪ್ರತಿಗಳ ವಿಷಯ ಸಂಪತ್ತು ಕುರಿತಾದ ಮತ್ತು ಅವು ಕಟ್ಟಿಕೊಡುವ ಜೀವನ ಮೌಲ್ಯಗಳನ್ನು ಕುರಿತಂತೆ ಕೆಳಕಂಡ ಫಲಿತಗಳನ್ನು ಕಂಡುಕೊಳ್ಳಲಾಗಿದೆ.

೧.ಅಧ್ಯಯನಕ್ಕೆ ಒಳಪಡಿಸಿದ ಎಲ್ಲ ಹಸ್ತಪ್ರತಿಗಳು ಲೌಕಿಕತೆಯನ್ನು ಬೋಧಿಸಿದರೂ ನಿರ್ದಿಷ್ಟ ಧಾರ್ಮಿಕತೆಯೊಂದಿಗೆ ಬದ್ಧವಾಗುವದರ ಜೊತೆಗೆ ಮಾನವ ಕಲ್ಯಾಣದತ್ತ ಕೇಂದ್ರೀಕೃತವಾಗಿವೆ.

೨.ರೂಪ ಹಾಗೂ ವಿಷಯ ಸ್ವರೂಪದ ಹಿನ್ನೆಲೆಯಲ್ಲಿ ಕನ್ನಡ ಹಸ್ತಪ್ರತಿಗಳು ಹೊಸ ಹೊಸ ಪ್ರಯೋಗಗಳಿಗೆ ಕಾರಣವಾದಂತೆ ವೈವಿಧ್ಯಮಯ ಪರಿಸರಕ್ಕೂ ಕಾರಣವಾದವು.

೩.ಹಸ್ತಪ್ರತಿಗಳ ಆದಿ ಮತ್ತು ಅಂತ್ಯ ಸ್ವರೂಪಗಳು ಲಿಪಿಕಾರರ, ಮನೋಧರ್ಮ, ಸಾಮಾಜಿಕ ಸಂಬಂಧ ಹಾಗೂ ಸಮುದಾಯದಲ್ಲಿನ ಅವರ ಆರ್ಥಿಕ ಸಮಾನತೆಯನ್ನು ತಿಳಿಯುವಲ್ಲಿ ನೆರವಾಗುತ್ತವೆ.

೪.ಹಸ್ತಪ್ರತಿಗಳ ಕಲಾತ್ಮಕತೆ ಮತ್ತು ಸುಂದರ ಲಿಪಿಗಳಿಂದ ಅನೇಕ ಲಿಪಿಕಾರರು,ಶಿಲ್ಪಿಗಳೂ,ಕಲಾವಿದರೂ, ಸೂಕ್ಷ್ಮಜ್ಞರು ಆಗಿರುವ ಸಾಧ್ಯತೆಗಳನ್ನು ಹಸ್ತಪ್ರತಿಗಳು ಸಮರ್ಥಿಸುತ್ತವೆ.

೫.ಸಣ್ಣ ಲಿಪಿಕಾರರು, ಉಭಯಲಿಪಿಕಾರರು,ಬಹುಲಿಪಿ ಲಿಪಿಕಾರರು,ಸುಂದರ ಲಿಪಿಕಾರರು, ಅಲಂಕಾರ ಲಿಪಿಕಾರರು ಮುಂತಾದ ಲಿಪಿವರ್ಗದವರು ಹಸ್ತಪ್ರತಿ ನಿರ್ಮಾಣ ಸಂದರ್ಭದಲ್ಲಿ ಅತ್ಯಂತ ಶ್ರದ್ಧೆಯಿಂದ ದುಡಿದಿದ್ದಾರೆ. ಹಸ್ತಪ್ರತಿಗಳಲ್ಲಿ ಸ್ಖಾಲಿತ್ಯಗಳಿದ್ದರೂ ಅವರಲ್ಲಿ ತಾಳ್ಮೆ, ಸಹನೆ ಮತ್ತು ಶ್ರದ್ಧೆಗಳಿರದಿದ್ದರೆ ಬಹುಶಃ ಹಸ್ತಪ್ರತಿ ಪರಂಪರೆಯಂತ ಬಹುದೊಡ್ಡ ಸಾಂಸ್ಕೃತಿಕ ಆಕರದ ನಿರ್ಮಾಣ ಸಾಧ್ಯವಾಗುತ್ತಿರಲಿಲ್ಲ.

೬.ಬೇರೆ ಬೇರೆ ಧಾರ್ಮಿಕ ಪಂಥದವರು ತಮ್ಮ ಧಾರ್ಮಿಕ ಹಸ್ತಪ್ರತಿಗಳನ್ನು ಆರಾಧನಾ ಪೂರ್ವಕವಾಗಿ ಪರಿಗಣಿಸಿ ರಕ್ಷಿಸಿಕೊಂಡು ಬಂದಿದ್ದಾರೆ. ಹಬ್ಬ, ಜಾತ್ರೆಗಳಂತ ಮತೀಯ ಸಂದರ್ಭಗಳಲ್ಲಿ ಈ ಹಸ್ತಪ್ರತಿಗಳನ್ನು ಹೊರತಗೆದು ಪೂಜಿಸಿ ಮತ್ತೆ ರಕ್ಷಿಸಿಡುವಂಥ ಆಚರಣೆಯ ಪರಂಪರೆಗಳು ಹಸ್ತಪ್ರತಿಯ ಸುತ್ತ ಹುಟ್ಟಿಕೊಂಡಿವೆ.

೭. ಕರ್ನಾಟಕದಲ್ಲಿ ಪ್ರಾಚೀನ ಹಸ್ತಪ್ರತಿಗಳ ಸಂಗ್ರಹ, ಸಂಪಾದನೆಯ ಕಾರ್ಯವನ್ನು ಮೊದಲು ಆರಂಭಿಸಿದರು ಪಾಶ್ಚಾತ್ಯ ಪಂಡಿತರು, ಕರ್ನಲ್ ಮೆಕಂಜಿ ಇಂಥ ಪ್ರಾಚ್ಯವಸ್ತುಗಳ ಸಂಗ್ರಹಕಾರ್ಯದಲ್ಲಿ ಅನನ್ಯವಾದ ಹೆಸರು. ಈ ಕಾರ್ಯದಿಂದ ಪ್ರೇರಣೆಗೊಂಡ ಮುಂದಿನ ದೇಶಿ ವಿದ್ವಾಂಸರು ಹಸ್ತಪ್ರತಿ ಸಂಗ್ರಹ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿ ಕೊಂಡರು. ಇದರಿಂದ ತುಂಬಾ ಕಷ್ಟಪಟ್ಟು ಸಂಕಲಿಸಿದ ಹಸ್ತಪ್ರತಿಗಳು ಒಂದು ಲಕ್ಷ ಕಟ್ಟಿನ ಸಂಖ್ಯೆಯನ್ನು ದಾಟಿ ಸಂಗ್ರಹವಾಗುತ್ತಿವೆ. ಆದಾಗ್ಯೂ ಹಸ್ತಪ್ರತಿಗಳ ಸಂಗ್ರಹ ಕಾರ್ಯ ಇನ್ನೂ ತೀವ್ರವಾಗಬೇಕಾಗಿದೆ.

ಶಾಸನಗಳಂತೆ ಸ್ಮಾರಕಗಳಂತೆ ಹಸ್ತಪ್ರತಿಗಳು ಸಾಂಸ್ಕೃತಿಕ ಅನನ್ಯತೆಯ ಅಧ್ಯಯನಕ್ಕೆ ಬಹುಮುಖ್ಯ ಆಕರಗಳಾಗಿವೆ. ಈಗ ಹಸ್ತಪ್ರತಿಯ ರೂಪದಲ್ಲಿ ದೊರೆಯುವ ಗ್ರಂಥಗಳೆಲ್ಲವೂ ಕೂಡಾ ಪ್ರಾಚೀನವಾದವು; ಸಂಗ್ರಹಯೋಗ್ಯವಾದವು. ಅವುಗಳನ್ನು ವೈಜ್ಞಾನಿಕ ಅಧ್ಯಯನಕ್ಕೊಳಪಡುವ ವೈಧಾನಿಕ ಕ್ರಮಗಳು ಕನ್ನಡದಲ್ಲಿ ಇನ್ನೂ ಬೆಳೆಯಬೇಕಾಗಿದೆಎಂಬುದಂತೂ ನಿರ್ವಿವಾದ ಸಂಗತಿ.

# ಉಲ್ಲೇಖಗಳು, ಪರಾಮರ್ಶನ ಗ್ರಂಥಗಳು


ಅನಂತಮೂರ್ತಿ ಯು.ಆರ್; ೧೯೯೨; ಸನ್ನಿವೇಶ ಅಕ್ಷರ ಪ್ರಕಾಶನ ; ಹೆಗ್ಗೋಡು

ಎಚ್ಚೆಸ್ಕೆ (ಸಂ); ೧೯೮೪; ದಾಸ ಸಾಹಿತ್ಯದರ್ಶನ; ಮಂಗಳ ಭಾರತಿ ಪ್ರಕಾಶನ ಮೈಸೂರು-೪

ಎನ್ಕೆ;ರಾಮಚಂದ್ರರಾವ್ ಎಸ್.ಕೆ (ಪ್ರೊ)೧೯೮೫; ದಾಸ ಸಾಹಿತ್ಯ; ಐ.ಬಿ.ಎಚ್ .ಪ್ರಕಾಶನ ಬೆಂಗಳೂರು

ಕಲಬುರ್ಗಿ ಎಂ.ಎಂ ; ೧೯೭೨ ; ಕನ್ನಡ ಗ್ರಂಥ ಸಂಪಾದನಾಶಾಸ್ತ್ರ ಸಿರಿಗನ್ನಡ ಪ್ರಕಾಶನ ಕನ್ನಡ ಅಧ್ಯಯನ ಸಂಸ್ಥೆ ಕರ್ನಾಟಕ ವಿಶ್ವವಿದ್ಯಾಲಯ -ಧಾರವಾಡ

ಕಲಬುರ್ಗಿ ಎಂ.ಎಂ ; ೧೯೭೨ ; ಕವಿರಾಜ ಮಾರ್ಗ ಪರಿಸರದ ಕನ್ನಡ ಸಾಹಿತ್ಯ; ಕರ್ನಾಟಕ ವಿಶ್ವವಿದ್ಯಾಲಯ- ಧಾರವಾಡ

ಕಲಬುರ್ಗಿ ಎಂ.ಎಂ. ; ೧೯೮೮ ; ಮಾರ್ಗ (ಎರಡು ಸಂಪುಟಗಳು); ನರೇಶ್ ಅಂಡ್ ಕಂಪನಿ . ಬೆಂಗಳೂರು

ಕಲಬುರ್ಗಿ ಎಂ.ಎಂ. ; ೧೯೮೯ ; ಕನ್ನಡ ಸಾಹಿತ್ಯ ಮತ್ತು ಪ್ರತಿಭಟನೆ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

ಕಲಬುರ್ಗಿ ಎಂ.ಎಂ. ; ೧೯೯೫ ; ಕನ್ನಡ ಹಸ್ತಪ್ರತಿಶಾಸ್ತ್ರ .ಸ್ನೇಹ ಪ್ರಕಾಶನ. ಬೆಂಗಳೂರು

ಕೀರ್ತಿನಾಥ ಕುರ್ತುಕೋಟಿ ; ೧೯೯೫ ; ಕನ್ನಡ ಸಾಹಿತ್ಯ ಸಂಗಾತಿ ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಕೆಳದಿ ಗುಂಡಾ ಜೊಯಿಸ್ ; ೧೯೮೯ ; ಶ್ರೀ ಜಗದ್ಗುರು ಮೂರುಸಾವಿರ ಮಠದ ವರ್ಣನಾತ್ಮಕ ಹಸ್ತಪ್ರತಿ ಸೂಚೀ ; ಶ್ರೀ ಜಗದ್ಗುರು ಮೂರು ಸಾವಿರ ಮಠ ಹುಬ್ಬಳ್ಳಿ

ಚಂದ್ರಕಾಂತ ಒಡ್ಡು ; ೧೯೯೨ ; ದ್ರಾವಿಡ ಭಾಷಾ ಸಾಹಿತ್ಯದಲ್ಲಿ ಜನಪರ ಆಶಯ ಕರ್ನಾಟಕ ಸಾಹಿತ್ಯ ಅಕಾಡೆಮಿ. ಬೆಂಗಳೂರು

ದೇವೀರಪ್ಪ ಎಚ್. ; ೧೯೭೨ ; ಮೈಸೂರು ಪ್ರಾಚ್ಯ ವಿದ್ಯಾ ಸಂಶೋಧನಾಲಯದ ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿಗಳು ಪ್ರಾಚ್ಯ ವಿದ್ಯಾ ಸಂಶೋಧನಾಲಯ ಮೈಸೂರು ವಿಶ್ವವಿದ್ಯಾನಿಲಯ -ಮೈಸೂರು

ದೇವೀರಪ್ಪ ಎಚ್ . ; ೧೯೭೭ ; ಕನ್ನಡ ಹಸ್ತಪ್ರತಿಗಳ ಇತಿಹಾಸ ; ಕನ್ನಡ ಸಾಹಿತ್ಯ ಪರಿಷತ್ತು . ಬೆಂಗಳೂರು

ನರಸಿಂಹಾಚಾರ್ ಡಿ.ಎಲ್ ; ೧೯೬೪ ; ಕನ್ನಡ ಗ್ರಂಥ ಸಂಪಾದನೆ ; ಶಾರದಾ ಮಂದಿರ , ರಾಮಯ್ಯರ್ ರಸ್ತೆ ಮೈಸೂರು-

ನರಸಿಂಹಾಚಾರ್ ಆರ್ . ; ೧೯೬೪ ; ಕರ್ನಾಟಕ ಕವಿಚರಿತೆಯ ಮೂರು ಸಂಪುಟಗಳು ; ಕನ್ನಡ ಸಾಹಿತ್ಯ ಪರಿಷತ್ತು , ಬೆಂಗಳೂರು

ನಾಗರತ್ನ ಟಿ.ಎಸ್ . ; ೧೯೮೬ ; ಹರಿದಾಸರ ಭಕ್ತಿ ಸ್ವರೂಪ ; ಮೈಸೂರು ವಿಶ್ವವಿದ್ಯಾಲಯ,ಮೈಸೂರು

ನಾಗರಾಜ ಕಿ.ರಂ.; ೧೯೮೩; ಪ್ರತಿಷ್ಠಿತ ಶಕ್ತಿ ಮತ್ತು ಕನ್ನಡ ಸಾಹಿತ್ಯ ; ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್ ಬೆಂಗಳೂರು-೨೯

ನಾಗರಾಜಪ್ಪ ಕೆ.ಜಿ. ;೧೯೮೫; ಮರುಚಿಂತನೆ; ಪ್ರಣತಿ ಪ್ರಕಾಶನ, ತುಮಕೂರು

ನಾಗರಾಜಪ್ಪ ಕೆ.ಜಿ.; ೧೯೮೯; ಸಾಹಿತ್ಯ ಮತ್ತು ಸಾಮಾಜಿಕ ನಿಲುವುಗಳು; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

ನಾಗರಾಜ ಡಿ.ಆರ್ . ; ೧೯೯೬ ; ಸಾಹಿತ್ಯ ಕಥನ, ಅಕ್ಷರ ಪ್ರಕಾಶನ , ಹೆಗ್ಗೋಡು

ನಾಗರಾಜಯ್ಯ .ಹಂಪ. ; ೧೯೭೫ ; ಸಾಂಗತ್ಯ ಕವಿಗಳು ; ಬೆಂಗಳೂರು ವಿಶ್ವವಿದ್ಯಾಲಯ ಬೆಂಗಳೂರು

ನಾಯಕ ಬಿ.ಎಚ್ ; ೧೯೯೧ ; ವಿನಯ ವಿಮರ್ಶೆ; ಕನ್ನಡ ಸಂಸ್ಕೃತಿ ಇಲಾಖೆ , ಬೆಂಗಳೂರು

ನಾಯಕ ಹ.ಮಾ. (ಪ್ರ.ಸಂ) ; ೧೯೭೭ ; ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರ ಸಂಪುಟಗಳು ` ಮೈಸೂರು ವಿಶ್ವವಿದ್ಯಾಲಯ ; ಮೈಸೂರು

ನಾರಾಯಣ ಕೆ.ವಿ. ;ಕೃಷ್ಣಮೂರ್ತಿ ಬಿ. (ಸಂ) ; ೧೯೯೩ ; ಅನ್ಯಜ್ಞಾನ ಶಿಸ್ತುಗಳ ಮೂಲಕ ಕನ್ನಡ ಸಾಹಿತ್ಯ ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

ನಾರಾಯಣ ಪಿ.ವಿ. ; ೧೯೭೫ ; ಚಂಪು ಕವಿಗಳು, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

ಪೂಜಾರ ವಿ.ಜಿ. ; ೧೯೯೧ ; ವೀರಶೈವ ಸಾಹಿತ್ಯದಲ್ಲಿ ಪವಾಡ ಕಥೆಗಳು, ಪುಸ್ತಕ ಅಕಾಡೆಮಿ, ಕಲಬುರ್ಗಿ

ಬರಗೂರು ರಾಮಚಂದ್ರಪ್ಪ ; ೧೯೯೩ ; ಸಂಸ್ಕೃತಿ ಮತ್ತು ಸೃಜನ ಶೀಲತೆ ; ಸುನಾದ ಪ್ರಕಾಶನ , ಬೆಂಗಳೂರು

ಬಸವರಾಜ ಕಲ್ಗುಡಿ ; ೧೯೮೮ ; ಮಧ್ಯಕಾಲೀನ ಭಕ್ತಿ ಮತ್ತು ಅನುಭಾವ ಸಾಹಿತ್ಯ ಹಾಗೂ ಚಾರಿತ್ರಿಕ ಪ್ರಜ್ಞೆ; ಕನ್ನಡ ಸಾಹಿತ್ಯ ಪರಿಷತ್ತು ,ಬೆಂಗಳೂರು

ಬಸವರಾಜು ಎಲ್ . ; ೧೯೯೩ ; ವಚನ ಸಾಹಿತ್ಯದಲ್ಲಿ ಕೆಳವರ್ಗದ ಆಶಯ ಮತ್ತು ಅಭಿವ್ಯಕ್ತಿ; ಕರ್ನಾಟಕ ಸಾಹಿತ್ಯ ಅಕಾಡೆಮಿ , ಬೆಂಗಳೂರು

ಮಂದಾಕಿನಿ ತವಗ (ಸಂ) ; ೧೯೯೬ ; ಪ್ರಬಂಧ, ೧೯೯೪ ; ಕರ್ನಾಟಕ ಸಾಹಿತ್ಯ ಅಕಾಡೆಮಿ,ಬೆಂಗಳೂರು

ಮರುಳಸಿದ್ದಪ್ಪ ಕೆ. ; ೧೯೭೫ ; ಷಟ್ಪದಿ ಸಾಹಿತ್ಯ , ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

ಮುಗಳಿ ರಂ.ಶ್ರೀ. ; ೧೯೮೫ ; ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು; ಉಷಾ ಸಾಹಿತ್ಯ ಮಾಲೆ, ಮೈಸೂರು-೧

ಮುಗಳಿ ರಂ.ಶ್ರೀ. ; ೧೯೮೬ ; ಪುನರ್ನವೋದಯ ; ರಸಿಕರಂಗ ಪ್ರಕಾಶನ, ಬೆಂಗಳೂರು

ಮುಗಳಿ ರಂ.ಶ್ರೀ. ; ೧೯೯೩ ; ಕನ್ನಡ ಸಾಹಿತ್ಯ ಚರಿತ್ರೆ ; ಗೀತಾ ಬುಕ್ ಹೌಸ್, ಮೈಸೂರು

ರಾಗೌ ; ೧೯೯೨ ; ಕನ್ನಡ ಕಾವ್ಯಗಳಲ್ಲಿ ಐತಿಹಾಸಿಕ ವಿಚಾರಗಳು; ಚಿತ್ರಕೂಟ ಪ್ರಕಾಶನ, ಜಯಲಕ್ಷ್ಮೀಪುರಂ, ಮೈಸೂರು- ೫೭೦೦೧೨

ರಾಮಕೃಷ್ಣ ಎಂ. ; ೧೯೮೪ ; ರನ್ನ ಮತ್ತು ಆತನ ಕೃತಿಗಳು ; ಮೈಸೂರು ವಿಶ್ವವಿದ್ಯಾಲಯ , ಮೈಸೂರು

ರಾಜಪ್ಪ ದಳವಾಯಿ ; ೧೯೯೩ ; ಕನ್ನಡ ಸಾಹಿತ್ಯ ಮತ್ತು ಪ್ರಭುತ್ವ ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

ವರದರಾಜರಾವ್ ಜಿ.(ಸಂ) ; ೧೯೮೭ ; ಹರಿದಾಸ ಸಾಹಿತ್ಯ ಸಮೀಕ್ಷೆ ; ಮೈಸೂರು ವಿಶ್ವವಿದ್ಯಾಲಯ,ಮೈಸೂರು

ವಿದ್ಯಾಶಂಕರ ಎಸ್. ; ೧೯೮೨ ;ವೀರಶೈವ ಪುರಾಣಗಳು ಒಂದು ಅಧ್ಯಯನ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

ವೀರಣ್ಣ ಸಿ. ; ೧೯೭೭ ; ಸಾಹಿತ್ಯ ಮತ್ತು ಸಾಮಾನ್ಯ ಮನುಷ್ಯ ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

ವೀರಣ್ಣ ಸಿ. ; ೧೯೮೬ ; ಕನ್ನಡ ಸಾಹಿತ್ಯ ಚಾರಿತ್ರಿಕ ಬೆಳವಣಿಗೆ-೧ ನವಕರ್ನಾಟಕ ಪ್ರಕಾಶನ , ಬೆಂಗಳೂರು

ವೆಂಕಟೇಶಮೂರ್ತಿ ಎಚ್.ಎಸ್. ; ೧೯೭೫ ; ಕೀರ್ತನಕಾರರು ; ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

ವೆಂಕಟೇಶಮೂರ್ತಿ ಎಚ್.ಎಸ್.; ೧೯೮೩; ಸಾಹಿತ್ಯ ಮತ್ತು ಸಾಮಾಜಿಕ ಪ್ರಜ್ಞೆ, ಬೆಂಗಳೂರು ವಿಶ್ವವಿದ್ಯಾಲಯ , ಬೆಂಗಳೂರು

ಶಿವರುದ್ರಪ್ಪ ಜಿ.ಎಸ್ . ; ೧೯೭೫ ; ಕನ್ನಡ ಸಾಹಿತ್ಯ ಸಮೀಕ್ಷೆ ; ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

ಶಿವರುದ್ರಪ್ಪ ಜಿ.ಎಸ್ . ; ೧೯೮೨ ; ವಿವಿಧ ; ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

ಶಿವರುದ್ರಪ್ಪ ಜಿ.ಎಸ್. ; ೧೯೮೯; ಕನ್ನಡ ಕವಿಗಳ ಕಾವ್ಯ ಕಲ್ಪನೆ; ಮೈಸೂರು ವಿಶ್ವವಿದ್ಯಾಲಯ, ಮೈಸೂರು

ಶಿವರುದ್ರಪ್ಪ ಜಿ.ಎಸ್.; ೧೯೯೦; ಕನ್ನಡ ಸಾಹಿತ್ಯ ಸಂದರ್ಭ , ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

ಶಿವರುದ್ರಪ್ಪ ಜಿ.ಎಸ್.(ಸಂ); ೧೯೯೧; ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ; ಸಂಪುಟಗಳು; ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

ಶಿವರುದ್ರಪ್ಪ ಜಿ.ಎಸ್.; ೧೯೯೪ ; ಸಮಗ್ರ ಗದ್ಯ ಸಂಪುಟ -೨; ಸ್ನೇಹ ಪ್ರಕಾಶನ,ಬೆಂಗಳೂರು

ಶಿವಣ್ಣ ಎಸ್ . ; ೧೯೮೨ ; ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ ಸಂ. ೧ ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

ಸದಾನಂದ ನಾಯಕ ; ೧೯೬೪; ಕನ್ನಡ ಸಾಹಿತ್ಯದಲ್ಲಿ ಜೈನ ಪುರಾಣಗಳು; ಕರ್ನಾಟಕ ವಿಶ್ವವಿದ್ಯಾಲಯ,ಧಾರವಾಡ

ಸಣ್ಣಯ್ಯ ಬಿ.ಎಸ್.(ಸಂ); ೧೯೮೨; ಹಸ್ತಪ್ರತಿಶಾಸ್ತ್ರ _ ಪರಿಚಯ;ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ, ಬೆಂಗಳೂರು

ಸೀತಾರಾಮ ಜಾಗೀರ್ ದಾರ್; ೧೯೭೮; ಗ್ರಂಥ ಸಂಪಾದನಾ ಶಾಸ್ತ್ರ . ಪರಿಚಯ;ಕನ್ನಡ ಸಾಹಿತ್ಯ ಸಂಘ; ರಂಗಂಪೇಟೆ(ಸುರಪುರ )

ಸಿತಾರಾಮಯ್ಯ ಎಂ.ವಿ.; ೧೯೭೫ ; ಶಾಸ್ತ್ರ ಸಾಹಿತ್ಯ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

ಒರೇಮಠ ಬಿ.ಕೆ.; ೧೯೯೨; ಕನ್ನಡ ಹಸ್ತಪ್ರತಿಗಳು, ಒಂದು ಅಧ್ಯಯನ, ವೀರಶೈವ ಅಧ್ಯಯನ ವೇದಿಕೆ, ಶ್ರೀ ಹಿರೇಮಠ , ಕಸಬಾ ಜಂಬಗಿ ತಾ: ಮುಧೋಳ ,ಜಿ:ವಿಜಾಪೂರ

ಅಭಿನಂದನಾ ಗ್ರಂಥಗಳು

ರಾಜೇಗೌಡ ಹ.ಕ. ; ೧೯೯೫ ; ಅಮೃತವರ್ಷ ;ದೇ.ಜ.ಗೌ.೭೫ ಅಭಿನಂದನಾ ಗ್ರಂಥ ದೇ.ಜ.ಗೌ ೭೫ ಅಭಿನಂದನಾ ಸಮಿತಿ, ಬೆಂಗಳೂರು

ಲಕ್ಷ್ಮಣ ತೆಲಗಾವಿ (ಸಂ) ; ೧೯೯೧ ; ಸಂಶೋಧನೆ ; ಡಾ. ಎಂ ಚಿದಾನಂದಮೂರ್ತಿ ಗೌರವ ಸಂಪುಟ, ಡಾ.ಎಂ.ಚಿದಾನಂದ ಮೂರ್ತಿ ಅಭಿನಂದನಾ ಸಮಿತಿ ಬೆಂಗಳೂರು

ಶಿರೂರ ಬಿ.ವಿ. (ಸಂ) ; ೧೯೮೯ ; ಗೌರವ ; ಪ್ರೊ.ಎಸ್ .ಭೂಸನೂರ ಮಠ ಅಭಿನಂದನಾ ಗ್ರಂಥ ವೀರಶೈವ ಅಧ್ಯಯನ ವೇದಿಕೆ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ ಗದಗ.

ಸೀತಾರಾಮಯ್ಯ ಎಂ.ವಿ. ಶೇಷ ಶಾಸ್ತ್ರಿ ಆರ್; (ಸಂ) ೧೯೮೨ ; ಮಣಿಹ; ಡಾ.ಫ.ಗು ಹಳಕಟ್ಟಿ ಜನ್ಮ ಶತಮಾನೋತ್ಸವ ಸಂಸ್ಕರಣ ಸಂಪುಟ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ (ರಿ) ಬೆಂಗಳೂರು.

ಶ್ರೀ ಕೃಷ್ಣ ಭಟ್ ಅರ್ತಿಕಜೆ ; ೧೯೯೫ ; **ಸಾರ್ಥಕ**; ಡಾ.ಎಂ.ಮರಿಯಪ್ಪಭಟ್ ಅಭಿನಂದನಾ ಗ್ರಂಥ

**ಸಾಹಿತ್ಯ ನಿಯತಕಾಲಿಕೆಗಳು**

ನಾಗರಾಜ ಕಿ.ರಂ ; ಪಂಪ, ಮಾರ್ಗ,ದೇಸಿ ಮತ್ತು ಚಾರಿತ್ರಿಕ ಪ್ರಜ್ಞೆ **ಅಂಕಣ**; ನಿರುಪಮಾ ಎ.ಆರ್ (ಸಂ) ಸಂಪುಟ-೧, ಸಂಚಿಕೆ-೩, ಮಾರ್ಚ್ ೧೯೮೦ ಕೋದಂಡರಾಮಪುರ, ಬೆಂಗಳೂರು.

ರಹಮತ್ ತರೀಕೆರೆ ; ಕಿತಾಬೆ ನವರಸ್ , ಸಾಮರಸ್ಯವಾದಿಗಳಿಗೆ ಬಲಿಯಾಗಬಹುದಾದ ಕೃತಿ; **ಸಂಕ್ರಮಣ** ; ಚಂದ್ರಶೇಖರ ಪಾಟೀಲ (ಸಂ) ಸಂಪುಟ-೩೩, ಸಂಚಿಕೆ ೫-೬ ಮೆ-ಜೂನ್-೧೯೯೩ ಸಂಕ್ರಮಣ ಪ್ರಕಾಶನ-ಧಾರವಾಡ.

ವೀರಣ್ಣ ರಾಜೂರ ; ಕನ್ನಡ ಹಸ್ತಪ್ರತಿಗಳ ವಿಷಯ ವೈವಿಧ್ಯ, **ಕರ್ನಾಟಕ ಭಾರತಿ**; ಎಂ.ಬಿ.ಕೊಟ್ರಶೆಟ್ಟಿ (ಸಂ) ,ಸಂಪುಟ-೧೬, ಸಂಚಿಕೆ ೧-೨, ಆಗಸ್ಟ್ -ನವ್ಹಂಬರ್ ೧೯೮೩ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

